KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೨ | ಬೆಂಗಳೂರು, ಗುರುವಾರ, ನವೆಂಬರ್ ೨೨, ೨೦೦೭ (ಮಾರ್ಗಶಿರ ೧, ಶಕ ವರ್ಷ ೧೯೨೯) | ಸಂಚಿಕೆ ೪೬ |
|---|---|---|



## ಭಾಗ–೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಸಿಆಸುಇ ಇಲಾಖೆಯ ಆಡಳಿತ ಸುಧಾರಣೆ ವಿಭಾಗಕ್ಕೆ ಹುದ್ದೆ ಸಹಿತ ವರ್ಗಾಹಿಸಲ್ಪಟ್ಟ ಜನಸ್ಪಂದ ಮಾಹಿತಿ ಹಕ್ಕು ಶಾಖೆಯಲ್ಲಿ ಪೂರಕ ಸಿಬ್ಬಂದಿ ಹುದ್ದೆಗಳ ಸೃಜನೆ ಕುರಿತು

**ಓದಲಾಗಿದೆ:**
1 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 04: ದಿನಾಂಕ: 06/09/04.
2 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 363 ಸಿಶಾಸೇ 06: ದಿನಾಂಕ: 17/10/06.
3 ಅರೆ ಸರ್ಕಾರಿ ಪತ್ರ ಸಂಖ್ಯೆ ಸಿಆಸುಇ 76 ಆಸಪ 06: ದಿನಾಂಕ: 22/12/06

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯ ಸಿಆಸು ಇಲಾಖೆಯ ಜನಸ್ಪಂದನ ಕೋಶದಲ್ಲಿ ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಅಧೀನ ಕಾರ್ಯದರ್ಶಿ ಹಾಗೂ ಶಾಖಾಧಿಕಾರಿಗಳ ತಲಾ 1 ಹುದ್ದೆ ಮತ್ತು 2 ವಿಷಯ ನಿರ್ವಾಹಕರ ಹುದ್ದೆಗಳನ್ನು ಸೃಜಿಸಲಾಗಿತ್ತು. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಈ ಹುದ್ದೆಗಳ ಸಹಿತ ಜನಸ್ಪಂದನ ಕೋಶದ ಸದರಿ ಶಾಖೆಯನ್ನು ಸಿಆಸು ಇಲಾಖೆಯ ಆಡಳಿತ ಸುಧಾರಣಾ ವಿಭಾಗಕ್ಕೆ ಸ್ಥಳಾಂತರಿಸಲಾಗಿರುತ್ತದೆ. ಸರ್ಕಾರ ಪ್ರಧಾನ ಕಾರ್ಯದರ್ಶಿ, ಸಿಆಸು ಇಲಾಖೆ (ಆಡಳಿತ ಸುಧಾರಣೆ, ತರಬೇತಿ & ರಾಜಕೀಯ ವಿಶ್ರಾಂತಿ ವೇತನ) ಇವರು ಮೇಲೆ ಓದಲಾದ (3)ರ ಅರೆ ಸರ್ಕಾರಿ ಪತ್ರದಲ್ಲಿ ಹುದ್ದೆ ಸಹಿತ ವರ್ಗಾಯಿಸಲ್ಪಟ್ಟ ಜನಸ್ಪಂದನ ವಿಭಾಗದ ಮಾಹಿತಿ ಹಕ್ಕು ಶಾಖೆಯಲ್ಲಿ ಪೂರಕ ಸಿಬ್ಬಂದಿ ಹುದ್ದೆಗಳಾದ ಶೀಘ್ರಲಿಪಿಗಾರ, ಬೆರಳಚ್ಚುಗಾರ, ಕಿರಿಯ ಸಹಾಯಕ ಹಾಗೂ ಗ್ರೂಪ್–ಡಿ ವೃಂದ ಒಂದೊಂದು ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಆಬೆಸೇ 2007, ಬೆಂಗಳೂರು, ದಿನಾಂಕ: 05/09/2007.**

ಕರ್ನಾಟಕ ಸರ್ಕಾರದ ಸಚಿವಾಲಯದ ಸಿಆಸು ಇಲಾಖೆಯ ಜನಸ್ಪಂದನ ವಿಭಾಗದಿಂದ ಆಡಳಿತ ಸುಧಾರಣೆ ವಿಭಾಗಕ್ಕೆ ವರ್ಗಾಯಿಸಲ್ಪಟ್ಟಿರುವ ಮಾಹಿತಿ ಹಕ್ಕು ಶಾಖೆಯಲ್ಲಿ ಈ ಕೆಳಕಂಡ ಪೂರಕ ಹುದ್ದೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದರಿ ಹುದ್ದೆಗಳನ್ನು ಮರುವಿನ್ಯಾಸದ (ರೀ–ಡಿಪ್ಲಾಯ್‌ಮೆಂಟ್) ಮೂಲಕ ಭರ್ತಿ ಮಾಡುವ ನಿಭಂದನೆಗೊಳಪಟ್ಟು ಸೃಜಿಸಲು ಮಂಜೂರಾತಿ ನೀಡಲಾಗಿದೆ.

| ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ |
|---|---|
| ಶೀಘ್ರಲಿಪಿಗಾರ | ಒಂದು ಹುದ್ದೆ |
| ಕಿರಿಯ ಸಹಾಯಕ | ಒಂದು ಹುದ್ದೆ |
| ಬೆರಳಚ್ಚುಗಾರ | ಒಂದು ಹುದ್ದೆ |
| ಗ್ರೂಪ್–ಡಿ | ಒಂದು ಹುದ್ದೆ |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 999 ವೆಚ್ಚ-5/2007: ದಿನಾಂಕ: 19/06/2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1628

**ಕೆ.ಬಿ. ಧನಂಜಯಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,(ಪ್ರ)

ಸಿಆಸುಇ (ಆಡಳಿತ-2)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಹಸ್ತಪ್ರತಿಗಳ ಸಂರಕ್ಷಣಾ ಕಾರ್ಯಾಗಾರದಲ್ಲಿ ಭಾಗವಹಿಸುವ ಸಲುವಾಗಿ ಕಾಸರಗೋಡಿಗೆ ಪ್ರವಾಸ ಕೈಗೊಳ್ಳಲು ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1 ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಬೆಂಗಳೂರು ಇವರ ಪತ್ರ ಸಂಖ್ಯೆ: ಎ.ಆರ್.ಎಸ್.10 ಡಿ.ಪಿ.ಇ. 2006 ದಿನಾಂಕ: 25.07.2007.

**ಪ್ರಸ್ತಾವನೆ :**

ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರು ಮೇಲೆ ಓದಲಾದ ದಿನಾಂಕ: 25-7-2007ರ ಪತ್ರದಲ್ಲಿ ರಾಷ್ಟ್ರೀಯ ಹಸ್ತಪ್ರತಿ ಅಭಿಯಾನ ನವದೆಹಲಿ ಹಾಗೂ ರಾಜ್ಯ ಪತ್ರಾಗಾರದ ಸಂಯುಕ್ತಾಶ್ರಯದಲ್ಲಿ ಕಾಸರಗೋಡಿನ ಕನ್ನೂರು ವಿಶ್ವವಿದ್ಯಾನಿಲಯದಲ್ಲಿ ದಿನಾಂಕ: 4-8-2007ರ ಮತ್ತು 5-8-2007ರಂದು ಹಸ್ತಪ್ರತಿಗಳ ಸಂರಕ್ಷಣೆ ಬಗ್ಗೆ ಕಾರ್ಯಾಗಾರವನ್ನು ಏರ್ಪಡಿಸಲಾಗಿದ್ದು, ಇದರಲ್ಲಿ ಭಾಗವಹಿಸಲು ಕಾಸರಗೋಡಿಗೆ ಪ್ರವಾಸ ಕೈಗೊಳ್ಳಲು ಸರ್ಕಾರದ ಅನುಮತಿ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 22 ರಾಪಸ 2007 ಬೆಂಗಳೂರು ದಿನಾಂಕ: 30-08-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಉದ್ದೇಶಕ್ಕಾಗಿ ದಿನಾಂಕ: 4-8-07 ಮತ್ತು 5-8-07 ರಂದು ಕಾಸರಗೋಡು ಪ್ರವಾಸ ಕೈಗೊಳ್ಳಲು ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ. ಅವರ ಪ್ರವಾಸ ಕಾಲದಲ್ಲಿ ಒಬ್ಬ ಅಧಿಕಾರಿಗೆ ಜವಾಬ್ದಾರಿ ನಿಗದಿಪಡಿಸಿ ಅವರು ಸದಾ ಕಾಲವು ಸರ್ಕಾರಕ್ಕೆ ಲಭ್ಯವಿರುವಂತೆ ವ್ಯವಸ್ಥೆ ಮಾಡತಕ್ಕದ್ದು, ಪ್ರವಾಸ ಮುಗಿದ ನಂತರ ನಿರ್ದೇಶಕರು ಪ್ರವಾಸ ಕುರಿತು ಒಂದು ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1627

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎನ್.ಹೆಚ್. ಸೂಳೆಬಾವಿ, ಕೆ.ಎ.ಎಸ್. ಅಧಿಕಾರಿ ಶ್ರೀ ಎಸ್. ಕೃಷ್ಣಮೂರ್ತಿ, ಕೆ.ಎ.ಎಸ್ ಅಧಿಕಾರಿ ಹಿಂದಿನ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಷ್ಣಾ ಮೇಲ್ದಂಡೆ ಯೋಜನೆ, ಜಮಖಂಡಿ ಮತ್ತು ಸದರಿ ಕಛೇರಿಯ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಎಸ್.ಪಿ. ವಡ್ಡರ, ಶ್ರೀ ಡಿ.ಜಿ. ದೊಡ್ಡಮನಿ, ಪ್ರಥಮ ದರ್ಜೆ ಕಂದಾಯ ನಿರೀಕ್ಷಕರು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**

1 ನೋಟೀಸ್ ಸಂಖ್ಯೆ: ಸಿಆಸುಇ 140 ಎಸ್ಇಎನ್ 2001 ದಿ: 15.6.05.

2 ಶ್ರೀ ಎನ್.ಹೆಚ್. ಸೂಳೆಬಾವಿ, ಕೆ.ಎ.ಎಸ್. ಅಧಿಕಾರಿ ಅವರ ದಿನಾಂಕ: 10.10.2005ಡಿ ಉತ್ತರ.

3 ಶ್ರೀ ಎಸ್. ಕೃಷ್ಣಮೂರ್ತಿ, ಕೆ.ಎ.ಎಸ್. ಅವರ ದಿನಾಂಕ: 16.7.2005ರ ಉತ್ತರ

4. ಶ್ರೀ ಎಸ್.ಪಿ. ವಡ್ಡರ, ಪ್ರಥಮ ದರ್ಜೆ ಸಹಾಯಕ, ಪುನರ್ವಸತಿ ಅಧಿಕಾರಿ ಕಛೇರಿ ಕೃ.ಮೇ.ಯೋ. ಆಲಮಟ್ಟಿ ಇವರ ದಿನಾಂಕ: 22.7.2005ರ ಉತ್ತರ.

5. ಶ್ರೀ ಡಿ.ಜಿ. ದೊಡ್ಡಮನಿ, ಪ್ರಥಮ ದರ್ಜೆ ಕಂದಾಯ ನಿರೀಕ್ಷಕ (ನಿ) ಇವರ ದಿನಾಂಕ: 28.7.05ರ ಉತ್ತರ.

**ಪ್ರಸ್ತಾವನೆ:**

ಶ್ರೀ ಎನ್.ಹೆಚ್. ಸೂಳೆಬಾವಿ, ಕೆ.ಎ.ಎಸ್. ಮತ್ತು ಶ್ರೀ ಎಸ್. ಕೃಷ್ಣಮೂರ್ತಿ, ಕೆ.ಎ.ಎಸ್. ಅಧಿಕಾರಿಗಳು ಇವರು ಈ ಹಿಂದೆ ಕೃಷ್ಣಾ ಮೇಲ್ದಂಡೆ ಯೋಜನೆ, ಜಮಖಂಡಿ ಇಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಗಳಾಗಿ ಮತ್ತು ಶ್ರೀ ಎಸ್.ಪಿ. ವಡ್ಡರ, ಹಾಗೂ ಶ್ರೀ ಡಿ.ಜಿ. ದೊಡ್ಡಮನಿ ಇವರುಗಳು ಪ್ರಥಮ ದರ್ಜೆ ಸಹಾಯಕ: ಪ್ರಥಮ ದರ್ಜೆ ಕಂದಾಯ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರು ಮುದ್ರಾಂಕ ಶುಲ್ಕ ವಿನಾಯಿತಿ ಪಡೆಯಲು ಸಂತ್ರಸ್ತರಿಗೆ ನೀಡಲಾದ ಪ್ರಮಾಣ ಪತ್ರಗಳಲ್ಲಿ ಕಟ್ಟಡಗಳ

ಮೌಲ್ಯಕ್ಕಿಂತ ಹೆಚ್ಚು ಮೌಲ್ಯ ನಮೂದಿಸಿ ಪ್ರಮಾಣ ಪತ್ರ ನೀಡಿರುವುದರಿಂದ ಸರ್ಕಾರಕ್ಕೆ ರೂ. 6,50,011.00ಗಳ ನಷ್ಟ ಉಂಟಾಗಿರುವ ಆರೋಪದ ಸಂಬಂಧ ಇವರುಗಳಿಗೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 18.6.2005ರ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿ ನಿಯಮ 11 ಮತ್ತು 11–ಎ ರನ್ವಯ ಜಾರಿ ಮಾಡಿ ಸಮಾಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಗಳು:ನೌಕರರು ಮೇಲೆ ಕ್ರಮ ಸಂಖ್ಯೆ (2) ರಿಂದ (5)ರಲ್ಲಿ ಓದಲಾದ ದಿನಾಂಕಗಳಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 140 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 6/9/2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (2)ರನ್ವಯ ನಿಯಮ 13ನ್ನು ಓದಿಕೊಂಡಂತೆ ಸರ್ಕಾರವು ಶ್ರೀ ಎನ್.ಹೆಚ್. ಸೂಳೆಬಾವಿ, ಕೆ.ಎ.ಎಸ್. ಹಾಲಿ ಪರಿಷತ್ ಕಾರ್ಯದರ್ಶಿ, ಮಹಾನಗರ ಪಾಲಿಕೆ, ಬೆಳಗಾಂ, ಶ್ರೀ ಎಸ್. ಕೃಷ್ಣಮೂರ್ತಿ, ಕೆ.ಎ.ಎಸ್. ಹಾಲಿ ಯೋಜನಾ ನಿರ್ದೇಶಕರು, ನಗರಾಭಿವೃದ್ಧಿ ಕೋಶ ಮಂಗಳೂರು, ಶ್ರೀ ಎಸ್.ಪಿ. ವಡ್ಡರ, ಪ್ರಥಮ ದರ್ಜೆ ಸಹಾಯಕ, ಪುನರ್ವಸತಿ ಅಧಿಕಾರಿಗಳ ಕಛೇರಿ, ಕೃಷ್ಣಾ ಮೇಲ್ದಂಡೆ ಯೋಜನೆ, ಆಲಮಟ್ಟಿ ಬಿಜಾಪುರ ಜಿಲ್ಲೆ ಮತ್ತು ಶ್ರೀ ಡಿ.ಜಿ. ದೊಡ್ಡಮನಿ (ನಿ) ಪ್ರಥಮ ದರ್ಜೆ ಕಂದಾಯ ನಿರೀಕ್ಷಕರು ಅವರುಗಳ ವಿರುದ್ಧ ಮಾಡಲಾದ ಆರೋಪಗಳ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಲು ಹೆಚ್ಚುವರಿ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾ ಅವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ ಬಾಗಲಕೋಟೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣೆಯನ್ನು 3 ತಿಂಗಳೊಳಗೆ ಮುಗಿಸಿ ವರದಿ ಸಲ್ಲಿಸುವಂತೆ ಆದೇಶಿಸಲಾಗಿದೆ.

ಈ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರ ಸೇವೆ ಹಾಗೂ ಇತರ ಸೌಲಭ್ಯಗಳನ್ನು ಆಯುಕ್ತರು, ಪ್ರಾದೇಶಿಕ ಆಯಕ್ತರ ಕಛೇರಿ, ಗುಲ್ಬರ್ಗಾ ಇವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1626

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಆಡಳಿತ-2)

**ವಿಷಯ:** ಶ್ರೀ ಹಬೀಬುಲ್ಲಾ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ–ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸಿರುವ ಬಗ್ಗೆ ಆದೇಶ

**ಓದಲಾಗಿದೆ:**
1 ನೋಟೀಸ್ ಸಂಖ್ಯೆ: ಸಿಆಸುಇ 33 ಎಸ್‌ಇಎನ್ 2005 ದಿನಾಂಕ: 26.5.2006
2 ಶ್ರೀ ಹಬೀಬುಲ್ಲಾ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರ ಉತ್ತರ ದಿನಾಂಕ: 12.2.2004
3 ಆದೇಶ ಸಂಖ್ಯೆ: ಸಿಆಸುಇ 33 ಎಸ್‌ಇಎನ್ 05 ದಿನಾಂಕ: 03.05.2007
4 ಶ್ರೀ ಅಮ್ಲಾನ್ ಆದಿತ್ಯ ಬಿಸ್ವಸ್, ಜಿಲ್ಲಾಧಿಕಾರಿಗಳು, ಹಾವೇರಿ ಹಾಗೂ ವಿಚಾರಣಾಧಿಕಾರಿಗಳು ಅವರ ವರದಿ ದಿನಾಂಕ: 8.6.2007.

**ಪ್ರಸ್ತಾವನೆ:**

ಶ್ರೀ ಹಬೀಬುಲ್ಲಾ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರು ಹಿಂದೆ ಕೊಪ್ಪಳ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸರ್ಕಾರಿ ಕಛೇರಿಗೆ ಬರುವ ಸಾರ್ವಜನಿಕರೊಂದಿಗೆ ಅನುಚಿತವಾಗಿ ವರ್ತಿಸಿದ ಆರೋಪ ಹಾಗೂ ದಿನಾಂಕ: 15.1.2005 ರಂದು ಶ್ರೀ ಬಂಡಿ ಈರಪ್ಪ, ಮಾಜಿ ಪುರಸಭಾ ಅಧ್ಯಕ್ಷರು, ಅವರೊಂದಿಗೆ ಅನುಚಿತವಾಗಿ ವರ್ತಿಸಿರುವುದು ಎಂದು ಸಲ್ಲಿಸಿರುವ ದೂರಿನ ಬಗ್ಗೆ ಹಾಗೂ ಸದರಿಯವರು ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಆಯುಕ್ತರಾಗಿ ಪ್ರಭಾರದಲ್ಲಿ ಕೆಲಸ ಮಾಡಿದ ಅವಧಿಯಲ್ಲಿ ದಿನಾಂಕ: 10.1.2004ರಂದು ನಗರಾಭಿವೃದ್ಧಿ ಪ್ರಾಧಿಕಾರದ 'ಸಿ' ದರ್ಜೆಯ ನೌಕರ ಶ್ರೀ ಬಾಬುಗೌಡ ಪಾಟೀಲ ಎಂಬುವವರ ಮನೆಗೆ ದೂರವಾಣಿ ಮೂಲಕ ಸಂಪರ್ಕಿಸಿ ಏಕವಚನದಲ್ಲಿ ದರ್ಪದ ಭಾಷೆಯಲ್ಲಿ ಮಾತನಾಡಿ ಅಧಿಕಾರ ದುರುಪಯೋಗ ಪಡಿಸಿಕೊಂಡ ಬಗ್ಗೆ ಶ್ರೀಮತಿ ವಿಜಯಲಕ್ಷ್ಮಿ ಬಿ. ಪಾಟೀಲ ಅವರು ಸಲ್ಲಿಸಿರುವ ದೂರಿನ ಬಗ್ಗೆ ವಿಚಾರಣೆ ನಡೆಸಲು ಉದ್ದೇಶಿಸಿ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು

ಪ್ರಾರಂಭಿಸಲಾಯಿತು. ಮೇಲೆ ಕ್ರಮ ಸಂಖ್ಯೆ (2)ರಂತೆ ಆಪಾದಿತ ಅಧಿಕಾರಿಯು ನೋಟೀಸ್‌ಗೆ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸುತ್ತಾರೆ. ಆದ್ದರಿಂದ ಸದರಿಯವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಆದೇಶದಲ್ಲಿ ಕೊಪ್ಪಳ ಜಿಲ್ಲಾಧಿಕಾರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ (4)ರಂತೆ ಸರ್ಕಾರಕ್ಕೆ ವಿಚಾರಣೆ ವರದಿಯನ್ನು ಸಲ್ಲಿಸಿ ಆರೋಪ ಸಂಬಂಧ ದಸ್ತಾವೇಜಿನ ಪುರಾವೆ ಹಾಗೂ ಮೌಖಿಕ ದಾಖಲೆಗಳನ್ನು ವಿಚಾರಣಾವಧಿಯಲ್ಲಿ ಪರಿಶೀಲಿಸಿ, ಶ್ರೀ ಹಬೀಬುಲ್ಲಾ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧ ಮಾಡಲಾದ ಎಲ್ಲಾ 5 ಆರೋಪಗಳು ಸಾಬೀತಾಗಿರುವುದಿಲ್ಲ ಎಂದು ನಿರ್ಣಯ ತಿಳಿಸಿರುತ್ತಾರೆ.

ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿ ಶ್ರೀ ಹಬೀಬುಲ್ಲಾ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಒಪ್ಪದೇ ಇರಲು ಯಾವುದೇ ಸಕಾರಣಗಳು ಕಂಡುಬರುತ್ತಿಲ್ಲ. ಆದ್ದರಿಂದ ಸದರಿ ಅಧಿಕಾರಿಯವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಆರೋಪಿತ ನಿವೃತ್ತ ಅಧಿಕಾರಿಯವರನ್ನು ಆರೋಪಗಳಿಂದ ಮುಕ್ತರನ್ನಾಗಿಸಿ ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 33 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 6/9/2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಹಬೀಬುಲ್ಲಾ (ನಿವೃತ್ತ) ಕೆ.ಎ.ಎಸ್. ಅಧಿಕಾರಿ (ಹಿಂದಿನ ಕೊಪ್ಪಳ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು) ಅವರನ್ನು ದಿನಾಂಕ: 26.5.2006ರ ನೋಟೀಸ್‌ನಲ್ಲಿ ಮಾಡಲಾದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1625

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವೆಗಳು–2)

**ವಿಷಯ:** ಶ್ರೀ ಬಿ.ಟಿ. ರಾಜಣ್ಣ, ಕೆ.ಎ.ಎಸ್. (ಕ್ರಿ.ಶ್ರೇ) ಅಧಿಕಾರಿ ಹಿಂದಿನ ವಿಶೇಷ ಭೂಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ ಶಿವಮೊಗ್ಗ ಇವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ

**ಓದಲಾಗಿದೆ:**
1 ನೋಟೀಸ್ ಸಂಖ್ಯೆ ಸಿಆಸುಇ 18 ಎಸ್‌ಇಎನ್ 2003, ದಿನಾಂಕ: 06.12.2004
2 ಶ್ರೀ ಬಿ.ಟಿ. ರಾಜಣ್ಣ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರ ಉತ್ತರ ದಿನಾಂಕ: 3.1.2005.

**ಪ್ರಸ್ತಾವನೆ:**

ಶ್ರೀ ಬಿ.ಟಿ. ರಾಜಣ್ಣ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರು ಹಿಂದೆ ವಿಶೇಷ ಭೂಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ತುಂಗಾ ಮೇಲ್ದಂಡೆ ಯೋಜನೆಗಾಗಿ ಭೂ ಸ್ವಾಧೀನಪಡಿಸಿಕೊಳ್ಳಲಾದ ಜಮೀನಿನ ಪೈಕಿ ಶಿವಮೊಗ್ಗ ತಾಲ್ಲೂಕು ಬೆಳಲಕಟ್ಟೆ ಗ್ರಾಮದ ಸರ್ವೆ ನಂಬರ್ 78ರಲ್ಲಿನ 1.03 ಎಕರೆ ಜಮೀನಿನ ಭೂ ಸ್ವಾಧೀನ ಪ್ರಕರಣದಲ್ಲಿ ಅನಾವಶ್ಯಕವಾಗಿ 0.23 ಎಕರೆ ಹೆಚ್ಚುವರಿ ಜಮೀನನ್ನು ಭೂ ಸ್ವಾಧೀನಪಡಿಸಿಕೊಂಡು ಶ್ರೀ ಹೆಚ್. ಷಣ್ಮುಖಪ್ಪ ಎಂಬುವವರಿಗೆ ಭೂ ಸ್ವಾಧೀನ ಪರಿಹಾರ ಹಣ ಪಾವತಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿರುವ ಆರೋಪದ ಸಂಬಂಧ ಸದರಿ ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಕಂದಾಯ ಇಲಾಖೆಯು ಪ್ರಸ್ತಾವನೆ ಕಳುಹಿಸಿರುತ್ತದೆ. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಮತ್ತು 11–ಎ ರನ್ವಯ ಸದರಿ ಅಧಿಕಾರಿಗೆ, ಮೇಲೆ (2)ರಲ್ಲಿ ಓದಲಾದ ದಿನಾಂಕ: 06.12.2004 ರಂದು ನೋಟೀಸನ್ನು ಜಾರಿ ಮಾಡಿ ಸಮಜಾಯಿಸಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸ್‌ಗೆ ಆರೋಪಿತ ಅಧಿಕಾರಿಯವರು ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅಧಿಕಾರಿಯವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 29.8.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಟಿ. ರಾಜಣ್ಣ ಕೆ.ಎ.ಎಸ್. (ಕಿ.ಶ್ರೇ) ಹಾಲಿ ನೇಮಕಾತಿ ನಿರೀಕ್ಷಣೆಯಲ್ಲಿ ಹಿಂದಿನ ವಿಶೇಷ ಭೂಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಜಿಲ್ಲೆ ಇವರ ವಿರುದ್ಧ ಮಾಡಲಾದ ಆರೋಪ ಕುರಿತು ವಿಚಾರಣೆ ನಡೆಸಲು ಸರ್ಕಾರವು ಪ್ರಾದೇಶಿಕ ಆಯುಕ್ತರು, ಮೈಸೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕಾರ್ಯಪಾಲಕ ಅಭಿಯಂತರರು, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಮಂಡನಾಧಿಕಾರಿಯಾಗಿ ನೇಮಕ ಮಾಡಿದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1587

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
ಸಿಆಸುಇ (ಸೇವೆಗಳು–2)

**ವಿಷಯ:** ಶ್ರೀ ವಿ.ವಿ. ಮಣೀದ್, ಕೆ.ಎ.ಎಸ್ (ಕಿ.ಶ್ರೇ) ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿ ಮುಂಡರಗಿ ತಾಲ್ಲೂಕು, ತಾಲ್ಲೂಕ್ ಪಂಚಾಯತ್ ಗದಗ್ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ– ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸುವ

**ಓದಲಾಗಿದೆ:**
1 ನೋಟೀಸ್ ಸಂಖ್ಯೆ: ಸಿಆಸುಇ 380 ಎಸ್‌ಇಎನ್ 2006. ದಿನಾಂಕ: 28.5.2007.
2 ಶ್ರೀ ವಿ.ವಿ. ಮನೀತ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರ ಉತ್ತರ ದಿನಾಂಕ: 12.6.2007.

**ಪ್ರಸ್ತಾವನೆ:**

ಶ್ರೀ. ವಿ.ವಿ. ಮಣೀದ್ ಕೆ.ಎ.ಎಸ್. (ಕಿರಿಯ ಶ್ರೇಣಿ) ಅವರು ಹಿಂದೆ ಮುಂಡರಗಿ ತಾಲ್ಲೂಕು ಪಂಚಾಯತ್ ಕಛೇರಿಯಲ್ಲಿ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಮುಂಡರಗಿ ತಾಲ್ಲೂಕಿನ ಸ್ವಯಂ ಸೇವಾ ಸಂಸ್ಥೆಗಳಿಗೆ ತರಬೇತಿಗಾಗಿ ಯಾವುದೇ ಹಣ ಮಂಜೂರು ಮಾಡದೇ ಇದ್ದರೂ 2001–02 ಹಾಗೂ 2002–03ನೇ ಸಾಲಿನ ಅವಧಿಯಲ್ಲಿ ಎಸ್‌ಜಿ.ಎಸ್.ವೈ. ಯೋಜನೆಯಡಿ ಸಹಾಯಧನಕ್ಕಾಗಿ ಬಿಡುಗಡೆ ಮಾಡಿದ ಬಾಬ್ತಿನ ಅನುದಾನದ ಪೈಕಿ ರೂ. 9,475.00 ಗಳನ್ನು ಮೇಲಾಧಿಕಾರಿಗಳ ಅನುಮೋದನೆ ಪಡೆಯದೇ ತರಬೇತಿಗಾಗಿ ವೆಚ್ಚ ಮಾಡಿ ಎಸ್.ಜಿ.ಎಸ್.ವೈ ಯೋಜನೆಯ ಅನುಷ್ಠಾನಕ್ಕೆ ವ್ಯತ್ಯಯ ಉಂಟು ಮಾಡಿ ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗಿದ ಆರೋಪಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ; ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಮತ್ತು 11–ಎ ರನ್ವಯ ಸದರಿ ಅಧಿಕಾರಿಗೆ, ಮೇಲೆ (2)ರಲ್ಲಿ ಓದಲಾದ ದಿನಾಂಕ: 28.5.2007ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಸಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸ್‌ಗೆ ಆರೋಪಿತ ಅಧಿಕಾರಿಯು ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಪತ್ರದಲ್ಲಿ ಉತ್ತರ ಸಲ್ಲಿಸಿ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನು ಹಾಗೂ ಮಂಡನಾಧಿಕಾರಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 380 ಎಸ್‌ಇಎನ್ 2006, ಬೆಂಗಳೂರು, ದಿನಾಂಕ: 30.8.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವಿ.ವಿ. ಮಣೀದ್, ಕೆ.ಎ.ಎಸ್. (ಕಿ.ಶ್ರೇ) ಹಿಂದಿನ ಕಾರ್ಯನಿರ್ವಹಣಾ ಅಧಿಕಾರಿ, ಮುಂಡರಗಿ ತಾಲ್ಲೂಕು ಪಂಚಾಯತ್ ಗದಗ್ ಜಿಲ್ಲೆ ಇವರ ವಿರುದ್ಧ ಮಾಡಲಾದ ಆರೋಪ ಕುರಿತು ವಿಚಾರಣೆ ನಡೆಸಲು ಸರ್ಕಾರವು ಪ್ರಾದೇಶಿಕ ಆಯುಕ್ತರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸಹಾಯಕ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಗದಗ್ ಅವರನ್ನು

ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1588

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
ಸಿಆಸುಇ (ಸೇವೆಗಳು–2)

**ವಿಷಯ:** ನೇರ ನೇಮಕಾತಿ ರಿಕ್ತ ಸ್ಥಾನಗಳನ್ನು ಬಡ್ತಿ ರಿಕ್ತ ಸ್ಥಾನಗಳನ್ನಾಗಿ ಪರಿವರ್ತಿಸುವ ಕುರಿತು.

**ಓದಲಾಗಿದೆ:** 1 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 32 ಸೇನಿಇ 96 ದಿನಾಂಕ 03.05.1996.
2 ವಿಧಾನಮಂಡಲದ ಅಧೀನ ಶಾಸನ ರಚನಾ ಸಮಿತಿಯ 32ನೇ ವರದಿ.

**ಪ್ರಸ್ತಾವನೆ:**

ರಾಜ್ಯ ಸಿವಿಲ್ ಸೇವೆಯಲ್ಲಿನ ಯಾವುದೇ ವೃಂದಕ್ಕೆ ನೇಮಕಾತಿಯನ್ನು ನೇಮಕಾತಿ ನಿಯಮದಲ್ಲಿ ನಿಗದಿಪಡಿಸಿದಂತಹ ವಿಧಾನವನ್ನು ಅನುಸರಿಸಿ ಮಾಡಬೇಕಾಗುತ್ತದೆ. ನೇರ ನೇಮಕಾತಿಯಿಂದ ತುಂಬಬೇಕಾದಂತಹ ಹುದ್ದೆಗಳನ್ನು ಆ ವಿಧಾನದಿಂದಲೇ ತುಂಬಬೇಕಾಗುತ್ತದೆ. ನೇರ ನೇಮಕಾತಿ ಖಾಲಿ ಹುದ್ದೆಗಳನ್ನು ಬಡ್ತಿ ಹುದ್ದೆಗಳನ್ನಾಗಿ ಪರಿವರ್ತಿಸಿ, ಅವುಗಳನ್ನು ಬಡ್ತಿಯಿಂದ ತುಂಬುವುದು ನೇಮಕಾತಿ ನಿಯಮದ ಉದ್ದೇಶವನ್ನು ವಿಫಲಗೊಳಿಸಿದಂತಾಗುತ್ತದೆ. ಸಿವಿಲ್ ಸೇವೆಯಲ್ಲಿನ ಕೆಲವು ವೃಂದಗಳಿಗೆ ಅನುಭವಿ ನೌಕರರ ಜೊತೆಗೆ ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿರುವ ನವ ಯುವಕರನ್ನು ಪಡೆಯುವ ಉದ್ದೇಶದಿಂದ ಬಡ್ತಿ ಮತ್ತು ನೇರ ನೇಮಕಾತಿ ಕೋಟಾವನ್ನು ನಿಗದಿಪಡಿಸಲಾಗಿರುತ್ತದೆ. ಈ ಕೋಟಾದನ್ವಯ ನೇಮಕಾತಿಯನ್ನು ಮಾಡದೇ ಇದ್ದಲ್ಲಿ, ಅದು ಸಿವಿಲ್ ಸೇವೆಯ ಮೇಲೆ ಪ್ರತಿಕೂಲ ಪರಿಣಾಮವನ್ನು ಬೀರುತ್ತದೆ. ಆದರೆ, ಹಿಂದೆ ಅನೇಕ ಕಾರಣಗಳಿಂದಾಗಿ ದೀರ್ಘ ಕಾಲದವರೆಗೆ ಕೆಲವು ವೃಂದಗಳಿಗೆ ನೇರ ನೇಮಕಾತಿ ನಡೆದಿರಲಿಲ್ಲ. ಆ ಹುದ್ದೆಗಳ ಕಾರ್ಯವನ್ನು ನಿರ್ವಹಿಸಲು ಅನುವಾಗುವಂತೆ ಪೋಷಕ ವೃಂದದಲ್ಲಿರುವ ನೌಕರರನ್ನು ಹಿಂಬಡ್ತಿಗೊಳಿಸಿಸುವುದು ಸೂಕ್ತವಲ್ಲವೆಂದು ಭಾವಿಸಿ, ನೇರ ನೇಮಕಾತಿ ಹುದ್ದೆಗಳನ್ನು ಕಾಲಕಾಲಕ್ಕೆ ತುಂಬದಿರುವುದರಿಂದ ಉಂಟಾದ ಸಮಸ್ಯೆಗಳನ್ನು ಪರಿಶೀಲಿಸಿ ಸೂಕ್ತ ಶಿಫಾರಸ್ಸು ಮಾಡಲು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಉಲ್ಲೇಖ (1)ರಲ್ಲಿ ನಮೂದಿಸಿರುವ ಆದೇಶದ ಮೂಲಕ ಒಂದು ಸಮಿತಿಯನ್ನು ರಚಿಸಲಾಗಿತ್ತು. ಈ ಸಮಿತಿಯು ಗುರುತಿಸಿದ ಕೆಲವು ಇಲಾಖೆಗಳಲ್ಲಿ ಒಂದು ಬಾರಿಯ ಕ್ರಮವಾಗಿ ನೇರ ನೇಮಕಾತಿ ಖಾಲಿ ಹುದ್ದೆಗಳನ್ನು ಬಡ್ತಿ ಹುದ್ದೆಗಳನ್ನಾಗಿ ಪರಿವರ್ತಿಸಲು ಶಿಫಾರಸ್ಸು ಮಾಡಿತ್ತು. ಅದರಂತೆ ಕ್ರಮ ಕೈಗೊಳ್ಳಲಾಗಿದೆ.

2. ದಿನಾಂಕ 25.05.2006ರಂದು ನಡೆದ ವಿಧಾನಮಂಡಲದ ಅಧೀನ ಶಾಸನ ರಚನಾ ಸಮಿತಿಯು ಸರ್ಕಾರದ ಬಹಳಷ್ಟು ಇಲಾಖೆಗಳಲ್ಲಿ ನೇರ ನೇಮಕಾತಿ ಖಾಲಿ ಹುದ್ದೆಗಳನ್ನು ಬಡ್ತಿ ಖಾಲಿ ಹುದ್ದೆಗಳನ್ನಾಗಿ ಪರಿವರ್ತಿಸಿದ ಅಧಿಸೂಚನೆಗಳನ್ನು ಪರಿಶೀಲಿಸಿ, ಹಾಗೆ ಪರಿವರ್ತಿಸಿದ ಕ್ರಮವು ಸರಿಯಲ್ಲವೆಂದು ಅಭಿಪ್ರಾಯಪಡುತ್ತಾ ಸಮಿತಿಯು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಸಮಿತಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿತ್ತು. ವಿಧಾನಮಂಡಲದ ಅಧೀನ ಶಾಸನ ರಚನಾ ಸಮಿತಿಯ 32ನೆಯ ವರದಿಯಲ್ಲಿ ಈ ಶಿಫಾರಸ್ಸು ಸೇರಿದೆ. ಈ ಶಿಫಾರಸ್ಸು ಹಾಗೂ ರಾಜ್ಯ ಸಿವಿಲ್ ಸೇವೆಯಲ್ಲಿನ ಕೆಲವು ವೃಂದಗಳಿಗೆ ಅನುಭವಿ ನೌಕರರ ಜೊತೆಗೆ ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿರುವ ಜನ ಯುವಕರನ್ನು ಪಡೆಯುವ ಉದ್ದೇಶದಿಂದ ಇನ್ನು ಮುಂದೆ ನೇರ ನೇಮಕಾತಿ ಖಾಲಿ ಹುದ್ದೆಗಳನ್ನು ನೇರ ನೇಮಕಾತಿಯಿಂದ ತುಂಬಲು ಕಟ್ಟುನಿಟ್ಟಿನ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲು ಉದ್ದೇಶಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 23 ಸೇನಿಇ 2006, ಬೆಂಗಳೂರು, ದಿನಾಂಕ: 6.9.2007**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ನೇರ ನೇಮಕತಿ ರಿಕ್ತ ಸ್ಥಾನಗಳನ್ನು ಬಡ್ತಿ ರಿಕ್ತ ಸ್ಥಾನಗಳನ್ನಾಗಿ ಪರಿವರ್ತಿಸುವ ಕುರಿತು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 32 ಸೇನಿಇ 96 ದಿನಾಂಕ 03.05.1996ರಲ್ಲಿ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಲಾಗಿದ್ದ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ ಮತ್ತು ಇನ್ನು ಮುಂದೆ ನೇರ ನೇಮಕಾತಿ ಖಾಲಿ ಹುದ್ದೆಗಳನ್ನು ಕಡ್ಡಾಯವಾಗಿ ನೇರ ನೇಮಕಾತಿಯಿಂದಲೇ ತುಂಬಲು ಕ್ರಮ ತೆಗೆದುಕೊಳ್ಳುವಂತೆ ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1624

**ಡಿ. ನಾಗೇಶ್ ಪಾಟಕ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವಾ ನಿಯಮಗಳು–3)

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ 07.08–1995.

2 ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಸಿಎಂ/ಅಕಾ/96/ನಾನಿ/07 ದಿನಾಂಕ 31.8.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರದಂತೆ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಈ ಆದೇಶದ ಮೇರೆಗೆ ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಓದಲಾದ (2)ರ ದಿನಾಂಕ 04–07–2007ರ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದ ಟಿಪ್ಪಣಿಯನ್ವಯ ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 75 ಯೋವಿವಿ 2007, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2007.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕೆಳಕಂಡ ಸದಸ್ಯರುಗಳನ್ನು ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ತಾಲ್ಲೂಕು | ಅಭ್ಯರ್ಥಿಗಳ ಹೆಸರು |
|---|---|---|
| 1. | ಆಳಂದ ತಾಲ್ಲೂಕು (ಗುಲ್ಬರ್ಗಾ ಜಿಲ್ಲೆ) | 1. ಶ್ರೀ ತಾನಾಜಿ ಸೂರ್ಯವಂಶಿ |
| | | 2. ಶ್ರೀ ಇಬ್ರಾಹಿಂ ಅನ್ಸಾರಿ |
| | | 3. ಶ್ರೀಮತಿ ಭಾಗೀರಥಿಬಾಯಿ ಗಂಡ ಸಿದ್ದಾರೂಡ ಅಂಕದ್ |
| | | 4. ಶ್ರೀ ಎಸ್.ಕೆ. ಪವಾರ್, ಸೆಟ್ ಫಾರಂ ತಾಂಡ, ಆಳಂದ |
| | | 5. ಶ್ರೀ ವಿರೂಪಾಕ್ಷಿ ಚನ್ನಮಲ್ಲಪ್ಪ ವಗ್ದಾರಗಿ, ರುದ್ರವಾಡಿ, ಆಳಂದ ತಾ. ಗುಲ್ಬರ್ಗಾ ಜಿ. |
| | | 6. ಶ್ರೀ ಸಂಜಯ ಪಾಂಡುರಂಗರಾವ್ ಮಿಸ್ಕಿನ್, ಆಳಂದ ತಾ, ಗುಲ್ಬರ್ಗಾ ಜಿಲ್ಲೆ |
| | | 7. ಅಣ್ಣಾರಾವ್ ತಿಪ್ಪಣ್ಣ ತಲಕೇರಿ, ಜಮಗ (ಆರ್), ಆಳಂದ ತಾ. ಗುಲ್ಬರ್ಗಾ ಜಿಲ್ಲೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1600

**ಎಂ.ಆರ್. ಮಹೇಶ್‌ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–1 ಮತ್ತು 2

ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಎಸ್. ನಿಜಲಿಂಗಪ್ಪ ಸ್ಮಾರಕ ಭವನ ನಿರ್ಮಿಸಲು ಧನಸಹಾಯ ನೀಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಸಂಕಇ 19 ಸ್ಮಾಪ್ರನಿ 2004 ದಿನಾಂಕ 11–1–2005.

2 ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ : 4 : ಎಸ್. ನಿಜಲಿಂಗಪ್ಪ ಟ್ರಸ್ಟ್: 2004–05 ದಿನಾಂಕ 6–3–2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 11.1.2005ರ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್. ನಿಜಲಿಂಗಪ್ಪ ಸ್ಮಾರಕ ಭವನ ನಿರ್ಮಿಸುವ ಸಲುವಾಗಿ ಎಸ್. ನಿಜಲಿಂಗಪ್ಪ ಮೆಮೋರಿಯಲ್ ಟ್ರಸ್ಟ್, ಚಿತ್ರದುರ್ಗ ಈ ಸಂಸ್ಥೆಗೆ ನೂರು ಲಕ್ಷ ರೂಪಾಯಿಗಳನ್ನು ಬಿಡುಗಡೆ ಮಾಡಲಾಗಿತ್ತು. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 6–3–2007ರ ಪತ್ರದಲ್ಲಿ ಎಸ್. ನಿಜಲಿಂಗಪ್ಪ ಮೆಮೋರಿಯಲ್ ಟ್ರಸ್ಟ್ ಸದರಿ ಅನುದಾನವನ್ನು ಉಪಯೋಗಿಸಿಕೊಂಡು ಕಟ್ಟಡವನ್ನು ನಿರ್ಮಿಸುತ್ತಿದ್ದು ಸದರಿ ನಿರ್ಮಾಣಕ್ಕಾಗಿ ಇನ್ನು 100 ಲಕ್ಷ ರೂಪಾಯಿಗಳ ಅಗತ್ಯ ಇರುವುದಾಗಿ ಚಿತ್ರದುರ್ಗ ಜಿಲ್ಲಾಧಿಕಾರಿಗಳು ತಿಳಿಸಿದ್ದು ಈಗಾಗಲೇ ಬಿಡುಗಡೆಯಾದ ಹಣಕ್ಕೆ ಹಣ ಬಳಕೆ ಪ್ರಮಾಣ ಪತ್ರ, ಲೋಕೋಪಯೋಗಿ ಇಲಾಖೆಯಿಂದ ದೃಢೀಕರಿಸಿದ ಅಂದಾಜು ವೆಚ್ಚ ಪಟ್ಟಿ, ನೀಲಿ ನಕಾಸೆ ಇತ್ಯಾದಿಗಳನ್ನು ಒದಗಿಸಿದ್ದು ಸ್ಮಾರಕ ನಿರ್ಮಾಣಕ್ಕಾಗಿ ಮತ್ತೆ 100 ಲಕ್ಷ ರೂಪಾಯಿಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 46 ಸ್ಮಾಪ್ರನಿ 2005, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2007**

ಚಿತ್ರದುರ್ಗ ಸಮೀಪ ಸಿಬಾರ ಗ್ರಾಮದ ಹತ್ತಿರ ನಿರ್ಮಿಸಲಾಗುತ್ತಿರುವ ಎಸ್. ನಿಜಲಿಂಗಪ್ಪ ಸ್ಮಾರಕ ನಿರ್ಮಾಣಕ್ಕಾಗಿ ಸರ್ಕಾರವು 100 ಲಕ್ಷ ರೂಪಾಯಿಗಳ (ಒಂದು ಕೋಟಿ ರೂಪಾಯಿಗಳು ಮಾತ್ರ) ಅನುದಾನವನ್ನು ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ಅವರಿಗೆ ಈ ಕೆಳಕಂಡ ನಿಬಂಧನೆಗೊಳಪಟ್ಟು ಬಿಡುಗಡೆ ಮಾಡಲು ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

(i) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯಿದೆ 1999 ಹಾಗೂ 2000ದ ನಿಯಮಗಳಲ್ಲಿನ ವಿಧಿವಿಧಾನಗಳನ್ನು ತಪ್ಪದೇ ಪಾಲಿಸತಕ್ಕದ್ದು;

(ii) ಯಾವ ಉದ್ದೇಶಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು;

(iii) ಅನುದಾನದ ಸಮರ್ಪಕ ಬಳಕೆಯ ಉಸ್ತುವಾರಿಯನ್ನು ವಹಿಸತಕ್ಕದ್ದು.

(iv) ಹಣ ಸದ್ವಿನಿಯೋಗವಾಗಿರುವುದಕ್ಕೆ ಹಣಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

(v) ಸದರಿ ಸ್ಮಾರಕ ನಿರ್ಮಾಣದ ಕಾಮಗಾರಿಯನ್ನು ಎಸ್. ನಿಜಲಿಂಗಪ್ಪ ಅವರ ಹುಟ್ಟುಹಬ್ಬದ ಒಳಗಾಗಿ ಅಂದರೆ 10–12–2007ರ ಒಳಗಾಗಿ ಪೂರ್ಣಗೊಳಿಸಿ ಸ್ಮಾರಕವನ್ನು ಸಾರ್ವಜನಿಕ ಉಪಯೋಗಕ್ಕೆ ತೆರೆಯತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನಲ್ಲಿ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–5–09–101 (ಯೋಜನೆ) ಇದರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 536:ವೆಚ್ಚ–5:2007 ದಿನಾಂಕ 17–5–2007ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1648

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ,

(ಆಡಳಿತ ಕನ್ನಡ)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಭೂ ಒಡೆತನ ಯೋಜನೆಯಡಿಯಲ್ಲಿ ಖರೀದಿಸುವ ಜಮೀನಿಗೆ ಮಾರ್ಗಸೂಚಿ ಬೆಲೆಯ ಮೇಲೆ ಶೇ. 25ರಷ್ಟು ಹೆಚ್ಚಿನ ಬೆಲೆಯನ್ನು ನಿಗದಿಪಡಿಸಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಸಮಿತಿಗೆ ಅಧಿಕಾರ ನೀಡುವ ಬಗ್ಗೆ–ಅದೇಶ.

**ಓದಲಾಗಿದೆ:** 1 ಸರ್ಕಾರಿ ಆದೇಶ ಸಂಖ್ಯೆ ಸಕಇ 42 ಎಸ್‌ಡಿಸಿ 2004 (ಭಾಗ) ದಿನಾಂಕ: 06–06–2006.

2 ವ್ಯವಸ್ಥಾಪಕ ನಿರ್ದೇಶಕರು, ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಇವರ ಪತ್ರ ಸಂಖ್ಯೆ: ಡಾ: ಬಿ.ಆರ್. ಅಂ:ಅ:ನಿ:ಸಂಯೋ:ವಿಮಂಸ:ವ್ಯಾ–3: 2006–07: 1435 ದಿನಾಂಕ: 25–04–07.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮವು ಅನುಷ್ಠಾನಗೊಳಿಸುತ್ತಿರುವ ಭೂ ಒಡೆತನ ಯೋಜನೆಯ ಘಟಕ ವೆಚ್ಚವನ್ನು ರಾಜ್ಯದ ಪ್ರತಿಯೊಂದು ಹಳ್ಳಿಗಳಿಗೆ ನೋಂದಣಿ ಇಲಾಖೆ ನಿಗದಿಪಡಿಸಿರುವ ಮಾರ್ಗಸೂಚಿ ಬೆಲೆಗೆ ಅನುಗುಣವಾಗಿ ಜಮೀನನ್ನು ಖರೀದಿಸಲು 2006–07ನೇ ಸಾಲಿನಿಂದ ಜಾರಿಗೆ ಬರುವಂತೆ ಮಂಜೂರಾತಿ ನೀಡಲಾಗಿದೆ.

12ನೇ ವಿಧಾನಸಭೆಯ ಕರ್ನಾಟಕ ವಿಧಾನ ಮಂಡಲದ ಅನುಸೂಚಿತ ಜಾತಿ ಮತ್ತು ಅನುಸೂಚಿತ ವರ್ಗಗಳ ಕಲ್ಯಾಣ ಸಮಿತಿಯ 2006–07ನೇ ಸಾಲಿನ ಮೂರನೇ ವರದಿಯ ಪ್ಯಾರಾ 3.1 ಮತ್ತು 3.2ರಲ್ಲಿ ರಾಜ್ಯದಲ್ಲಿ ಭೂಮಿ ಬೆಲೆಯು ಅತೀ ಹೆಚ್ಚಾಗಿದ್ದು, ಸರ್ಕಾರದ ಮಾರ್ಗಸೂಚಿಯ ಪ್ರಕಾರ ಭೂಮಿಯನ್ನು ಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಭೂಮಿಯನ್ನು ಕೊಳ್ಳಲು ಆಯಾ ಪ್ರದೇಶಕ್ಕನುಗುಣವಾಗಿ ಭೂಮಿಯ ಬೆಲೆಯನ್ನು ಶೇ. 25ರಷ್ಟು ಹೆಚ್ಚಿಸುವ ಅಧಿಕಾರವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ನೀಡಬೇಕೆಂದು ಸಮಿತಿಯು ಶಿಫಾರಸ್ಸು ಮಾಡಿರುತ್ತದೆ ಎಂದು ತಿಳಿಸುತ್ತಾ, ಮೇಲೆ ಓದಲಾದ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಇವರು ಮಾರ್ಗಸೂಚಿ ಬೆಲೆಗೆ ಜಮೀನನ್ನು ಕೊಳ್ಳಲು ಸಾಧ್ಯವಾಗದೇ ಇರುವಂತಹ ಕಡೆ ಜಮೀನನ್ನು ಆಯ್ಕೆ ಮಾಡುವ ಜಿಲ್ಲಾ ಸಮಿತಿಯ ಅಧ್ಯಕ್ಷರಾದ ಜಿಲ್ಲಾಧಿಕಾರಿಗಳಿಗೆ ಜಮೀನಿನ ಫಲವತ್ತತೆ ಬಗ್ಗೆ ಪರಿಶೀಲಿಸಿ, ಮಾರ್ಗಸೂಚಿ ಬೆಲೆಯ ಶೇ. 25ರಷ್ಟು ಬೆಲೆಯನ್ನು ಹೆಚ್ಚಿಸಿ ನಿಗದಿಪಡಿಸಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡುವ ಬಗ್ಗೆ ಆದೇಶ ಹೊರಡಿಸಲು ಕೋರಿದ್ದಾರೆ. ಈ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 80 ಎಸ್‌ಡಿಸಿ 07, ಬೆಂಗಳೂರು, ದಿನಾಂಕ: 21.08.07**

ಮೇಲೆ ಓದಲಾದ (1)ರ ಆದೇಶದಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮವು ಅನುಷ್ಠಾನಗೊಳಿಸುತ್ತಿರುವ ಭೂ ಒಡೆತನ ಯೋಜನೆಯಡಿ ರಾಜ್ಯದ ಪ್ರತಿಯೊಂದು ಹಳ್ಳಿಗೆ ನೋಂದಣಿ ಇಲಾಖೆ ನಿಗದಿಪಡಿಸಿದ ಮಾರ್ಗಸೂಚಿ ಬೆಲೆಗೆ ಅನುಗುಣವಾಗಿ ಜಮೀನನ್ನು ಖರೀದಿಸಲು 2006–07ನೇ ಸಾಲಿನಿಂದ ಜಾರಿಗೆ ಬರುವಂತೆ ಸರ್ಕಾರವು ಮಂಜೂರಾತಿ ನೀಡಲಾಗಿದೆ.

ಮಾರ್ಗಸೂಚಿ ಬೆಲೆಗೆ ಜಮೀನನ್ನು ಕೊಳ್ಳಲು ಸಾಧ್ಯವಾಗದೇ ಇರುವಂತಹ ಕಡೆಗೆ, ಸ್ಥಳೀಯ ಮಾರುಕಟ್ಟೆ ಬೆಲೆ ಹಾಗೂ ಭೂಮಿಯ ಫಲವತ್ತತೆ ಇತ್ಯಾದಿಯನ್ನು ಪರಿಶೀಲಿಸಿ ಮಾರ್ಗಸೂಚಿ ಬೆಲೆಯ ಶೇ. 25ರಷ್ಟು ಹೆಚ್ಚಿನ ಬೆಲೆಯನ್ನು ಭೂಮಿ ಖರೀದಿ ಯೋಜನೆಯಡಿಯಲ್ಲಿ ಖರೀದಿಸುವ ಜಮೀನಿನ ಬೆಲೆಯನ್ನು ನಿಗದಿಪಡಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಸಮಿತಿಗೆ ಅಧಿಕಾರ ನೀಡಲಾಗಿದೆ. ಈ ಕಾರ್ಯಕ್ರಮಕ್ಕೆ ಅಗತ್ಯವಿರುವ ಹೆಚ್ಚುವರಿ ವೆಚ್ಚವನ್ನು ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮಕ್ಕೆ ಒದಗಿಸಲಾಗಿರುವ ಅನುದಾನದಲ್ಲಿಯೇ ಭರಿಸತಕ್ಕದ್ದು ಎಂಬ ಷರತ್ತಿಗೊಳಪಟ್ಟು ಹೆಚ್ಚಿನ ಬೆಲೆ ನಿಗದಿಪಡಿಸಲು ಅನುಮತಿ ನೀಡಲಾಗಿದೆ.

ಮೇಲ್ಕಂಡ ಅಂಶವನ್ನು ಹೊರತುಪಡಿಸಿ ಭೂ ಒಡೆತನ ಯೋಜನೆಯ ಇತರೆ ಷರತ್ತುಗಳು ಈ ಹಿಂದೆ ಇದ್ದಂತೆಯೇ ಅನ್ವಯವಾಗತಕ್ಕದ್ದು.

ಈ ಆದೇಶವನ್ನು ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯ ಹಿಂಬರಹ ಸಂಖ್ಯೆ: ಪಿಡಿ 07 ಐಎಂಎಂ 07, ದಿನಾಂಕ: 30.06.07 ಹಾಗೂ ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 375 ವೆಚ್ಚ–3/07, ದಿನಾಂಕ: 25–07–07ರಲ್ಲಿ ನೀಡಿದ ಸಹಮತಿಯೊಡನೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1604

**ಎ.ಎಂ ಚಿದಾನಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಸಮಾಜ ಕಲ್ಯಾಣ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕರ್ನಾಟಕ ಗೇರು ಅಭಿವೃದ್ಧಿ ನಿಗಮದ ಸಾಲದ ಮರುಪಾವತಿ ಬಗ್ಗೆ

**ಓದಲಾಗಿದೆ:**
1 ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆರವರ ಅಧ್ಯಕ್ಷತೆಯಲ್ಲಿ ದಿನಾಂಕ: 19–04–2007ರ ಸಭೆಯ ನಡವಳಿ
2 ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರ ಪತ್ರ ಸಂಖ್ಯೆ: ಡಿ–1/ಸಿಆರ್–55/ಬಿಯುಡಿ/2006–07, ದಿನಾಂಕ: 07–05–2007.

**ಪ್ರಸ್ತಾವನೆ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ರವರ ಅಧ್ಯಕ್ಷತೆಯಲ್ಲಿ ದಿನಾಂಕ: 19–04–2007ರಂದು ಕರ್ನಾಟಕ ಗೇರು ಅಭಿವೃದ್ಧಿ ನಿಗಮವು ವಿವಿಧ ಬ್ಯಾಂಕುಗಳಿಗೆ ನೀಡಬೇಕಾದ ರೂ. 565.00 ಲಕ್ಷಗಳ ಬಾಕಿ ಹಣವನ್ನು ಒನ್ ಟೈಮ್ ಸೆಟಲ್‌ಮೆಂಟ್ ಪ್ರಕಾರ ಮರುಪಾವತಿಸಲು ಕರ್ನಾಟಕ ಅರಣ್ಯ ಇಲಾಖೆಗೆ ರೂ. 300.00 ಲಕ್ಷಗಳನ್ನು ನೀಡುವಂತೆ ಮತ್ತು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮಕ್ಕೆ ರೂ. 200.00 ಲಕ್ಷಗಳನ್ನು ಹಾಗೂ ಕರ್ನಾಟಕ ಅರಣ್ಯ ಕೈಗಾರಿಕೆ ನಿಗಮಕ್ಕೆ ರೂ. 65.00 ಲಕ್ಷಗಳನ್ನು ಶೇ. 8 ರಂತೆ ಬಡ್ಡಿಯನ್ನು ಹಾಗೂ ಈ ಹಣವನ್ನು 8 ವರ್ಷಗಳೊಳಗೆ ಪಾವತಿಸುವ ಷರತ್ತಿಗೊಳಪಟ್ಟು ಕರ್ನಾಟಕ ಗೇರು ಅಭಿವೃದ್ಧಿ ನಿಗಮಕ್ಕೆ ಸಾಲವನ್ನು ನೀಡಬೇಕಾಗಿ ಸಭೆಯಲ್ಲಿ ತೀರ್ಮಾನಿಸಲಾಗಿದ್ದಿತು.

ಮೇಲೆ ಓದಲಾದ ಕ್ರಮ ಸಂಖ್ಯೆ: 2ರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರು ತಮ್ಮ ಪತ್ರದಲ್ಲಿ ಕರ್ನಾಟಕ ಗೇರು ಅಭಿವೃದ್ಧಿ ನಿಗಮದ ಸಾಲ ಮರುಪಾವತಿಗಾಗಿ ರೂ. 300.00 ಲಕ್ಷಗಳನ್ನು 2007–08ನೇ ಸಾಲಿನ ಲೆಕ್ಕಶೀರ್ಷಿಕೆ "2406–01–105–0–01–139" (ಯೋಜನೇತರ) ಇದರಡಿಯಲ್ಲಿ ಒದಗಿಸಲಾಗಿರುವ ಅನುದಾನದಿಂದ ನೀಡುವುದಾಗಿ ತಿಳಿಸಿರುತ್ತಾರೆ.

ಈ ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 24 ಎಫ್‌ಪಿಸಿ 2002, ಬೆಂಗಳೂರು, ದಿನಾಂಕ: 20–08–2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ಗೇರು ಅಭಿವೃದ್ಧಿ ನಿಗಮಕ್ಕೆ ಸಾಲದ ಮರುಪಾವತಿಗಾಗಿ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮವು ರೂ. 200.00 ಲಕ್ಷಗಳನ್ನು ಹಾಗೂ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕ ನಿಗಮವು ರೂ. 65.00 ಲಕ್ಷಗಳನ್ನು ಸಾಲದ ರೂಪದಲ್ಲಿ ನೀಡುವ ಹಣವನ್ನು ಶೇ. 8ರ ಬಡ್ಡಿಯಂತೆ ಹಾಗೂ ಈ ಸಾಲವು 8 ವರ್ಷದೊಳಗೆ ಮರುಪಾವತಿಸಿಕೊಳ್ಳುವ ಷರತ್ತಿಗೊಳಪಟ್ಟು ನೀಡಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1578

**ಹೆಚ್.ಎಂ. ಮಲ್ಲಿಕಾರ್ಜುನ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಆರ್ಥಿಕ ಸಚಿವಾಲಯ**

**ವಿಷಯ:** ಚನ್ನರಾಯಪಟ್ಟಣದಲ್ಲಿ ಸರ್ಕಾರಿ ನೌಕರರ ಸಮುದಾಯ ಭವನವನ್ನು ನಿರ್ಮಿಸಲು ಚನ್ನರಾಯಪಟ್ಟಣ ತಾಲ್ಲೂಕಿನ ರಾಜ್ಯ ಸರ್ಕಾರಿ ನೌಕರರಿಂದ ಒಂದು ದಿವಸದ ವೇತನವನ್ನು ವಂತಿಗೆಯಾಗಿ ಕಟಾವುಗೊಳಿಸುವ ಬಗ್ಗೆ.

**ಓದಲಾಗಿದೆ:**
1 ಜಿಲ್ಲಾಧಿಕಾರಿ, ಹಾಸನ ಜಿಲ್ಲೆ, ಹಾಸನ ಇವರ ಪತ್ರ ಸಂಖ್ಯೆ: ಎಸಿಟಿ/03/2007-08 ದಿನಾಂಕ 11.04.2007.
2 ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಇಎ/3968:2007-08 ದಿನಾಂಕ 21-06-2007.
3 ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಇಎ/4081:2007-08 ದಿನಾಂಕ 27-08-2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 11-04-2007ರ ಪತ್ರದಲ್ಲಿ ಚನ್ನರಾಯಪಟ್ಟಣ ತಾಲ್ಲೂಕು, ಕಸಬಾ ಹೋಬಳಿ, ಕೆರೆ ಚಿಕ್ಕೋನಹಳ್ಳಿ ಗ್ರಾಮದ ಸಂಖ್ಯೆ ನಂ. 30 ರಲ್ಲಿ 0.30 ಗುಂಟೆ ಜಮೀನನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಚನ್ನರಾಯಪಟ್ಟಣಕ್ಕೆ ಜಿಲ್ಲಾಧಿಕಾರಿಗಳು, ಹಾಸನ ರವರ ಆದೇಶ ಸಂಖ್ಯೆ: ಎಲ್‌ಎನ್‌ಡಿ (1) 528/03-04 ದಿನಾಂಕ 9-03-2004ರಲ್ಲಿ ಹಸ್ತಾಂತರಿಸಲಾಗಿದ್ದು, ಈ ಜಾಗದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಚನ್ನರಾಯಪಟ್ಟಣ ಶಾಖೆ ಇವರು ರೂ. 109.80 ಲಕ್ಷ ಅಂದಾಜು ವೆಚ್ಚದಲ್ಲಿ ಸಮುದಾಯ ಭವನವನ್ನು ನಿರ್ಮಿಸಲು ಉದ್ದೇಶಿಸಿ, ಕೆಳ ಅಂತಸ್ತಿನ ಆರ್‌ಸಿಸಿ ಕೆಲಸವನ್ನು ರೂ. 20.00 ಲಕ್ಷಗಳ ವೆಚ್ಚದಲ್ಲಿ ಮುಗಿಸಿದ್ದು, ಆದರೆ ಮುಂದಿನ ಕೆಲಸ ಕಾರ್ಯಗಳಿಗೆ ಆರ್ಥಿಕ ಅಡಚಣೆ ಉಂಟಾಗಿರುವ ಕಾರಣ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಕೆಲಸ ಮಾಡುತ್ತಿರುವ ಪ್ರತಿಯೊಬ್ಬ ರಾಜ್ಯ ಸರ್ಕಾರಿ ನೌಕರರಿಂದ ಒಂದು ದಿವಸದ ವೇತನವನ್ನು ವಂತಿಗೆಯಾಗಿ ಪಡೆಯಲು ರಾಜ್ಯ ಸರ್ಕಾರಿ ನೌಕರರ ಸಂಘ, ಚನ್ನರಾಯಪಟ್ಟಣ ಇವರು ದಿನಾಂಕ 09-01-2007 ರಂದು ನಡೆದ ಸಭೆಯಲ್ಲಿ ಸರ್ವಾನುಮತದಿಂದ ತೀರ್ಮಾನಿಸಿದ್ದು, ಈ ಹಿನ್ನೆಲೆಯಲ್ಲಿ ಸದರಿ ತಾಲ್ಲೂಕಿನ ಸರ್ಕಾರಿ ನೌಕರರುಗಳಿಂದ ಅವರುಗಳ ಒಪ್ಪಿಗೆ ಮೇರೆಗೆ ಒಂದು ದಿವಸದ ವೇತನವನ್ನು ವಂತಿಗೆಯಾಗಿ ಕಟಾವು ಮಾಡಲು ಸರ್ಕಾರದ ಆದೇಶವನ್ನು ಹೊರಡಿಸಬೇಕೆಂದು ಚನ್ನರಾಯಪಟ್ಟಣ ರಾಜ್ಯ ಸರ್ಕಾರಿ ನೌಕರರ ಸಂಘದವರು ಮನವಿ ಪತ್ರವನ್ನು ಚನ್ನರಾಯಪಟ್ಟಣದ ತಹಸೀಲ್ದಾರರ ಮೂಲಕ ಸಲ್ಲಿಸಿರುವುದಾಗಿ ಹಾಸನ ಜಿಲ್ಲೆಯ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ 27-08-2007ರ ಪತ್ರದಲ್ಲಿ, ಅಧ್ಯಕ್ಷರು, ಕರ್ನಾಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರು ಚನ್ನರಾಯಪಟ್ಟಣದಲ್ಲಿ ಸದ್ದುದ್ದೇಶದಿಂದ ಹಾಗೂ ನೌಕರರ ಅನುಕೂಲಕ್ಕಾಗಿ ಸಮುದಾಯ ಭವನವು ನಿರ್ಮಾಣಗೊಳ್ಳುತ್ತಿರುವುದರಿಂದ ಭವನ ನಿರ್ಮಾಣ ಕಾರ್ಯ ಪೂರ್ಣಗೊಳಿಸಲು ಅನುಕೂಲವಾಗುವಂತೆ ತಾಲ್ಲೂಕಿನಾದ್ಯಂತ ಸೇವೆ ಸಲ್ಲಿಸುತ್ತಿರುವ ಸರ್ಕಾರಿ ನೌಕರರಿಂದ ಸೆಪ್ಟೆಂಬರ್ 2007ರ ಮಾಹೆಯ ವೇತನದಲ್ಲಿ ಒಂದು ದಿನದ ವೇತನವನ್ನು ಕಟಾವುಗೊಳಿಸಲು ಹಾಗೂ ಇದಕ್ಕೆ ಪೂರಕವಾಗಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಗಿನಂತೆ ಆದೇಶ ಹೊರಡಿಸಿದೆ

**ಸರ್ಕಾರಿ ಆದೇಶ ಸಂಖ್ಯೆ: ಆಇ 37 ಎಸ್‌ಆರ್‌ಪಿ 2007, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಚನ್ನರಾಯನಪಟ್ಟಣ ತಾಲ್ಲೂಕಿನ ರಾಜ್ಯ ಸರ್ಕಾರಿ ನೌಕರರಿಂದ ಒಂದು ದಿವಸದ ವೇತನವನ್ನು ವಂತಿಗೆಯಾಗಿ ಪಡೆಯಲು ರಾಜ್ಯ ಸರ್ಕಾರಿ ನೌಕರರ ಸಂಘ, ಚನ್ನರಾಯಪಟ್ಟಣ ಇವರು ದಿನಾಂಕ 09-01-2007 ರಂದು ನಡೆದ ಸಭೆಯಲ್ಲಿ ಸರ್ವಾನುಮತದಿಂದ ತೀರ್ಮಾನಿಸಿದಂತೆ ಚನ್ನರಾಯಪಟ್ಟಣದಲ್ಲಿ ಸರ್ಕಾರಿ ನೌಕರರ ಸಮುದಾಯ ಭವನವನ್ನು ನಿರ್ಮಿಸಲು ತಾಲ್ಲೂಕಿನಾದ್ಯಂತ ಸೇವೆ ಸಲ್ಲಿಸುತ್ತಿರುವ ರಾಜ್ಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು 2007ರ ಸೆಪ್ಟೆಂಬರ್ ತಿಂಗಳ ವೇತನದಲ್ಲಿ ಕಟಾಯಿಸಲು ಹಾಗೂ ಈ ರೀತಿ ಕಟಾವು ಮಾಡಿ ಸಂಗ್ರಹಿಸಿದ ಒಟ್ಟು ಮೊತ್ತವನ್ನು ಚನ್ನರಾಯಪಟ್ಟಣದಲ್ಲಿ ರಾಜ್ಯ ಸರ್ಕಾರಿ ನೌಕರರ ಸಮುದಾಯ ಭವನದ ನಿರ್ಮಾಣಕ್ಕಾಗಿ ವಿನಿಯೋಗಿಸಲು ಜಿಲ್ಲಾಧಿಕಾರಿಗಳ ವಶಕ್ಕೆ ನೀಡಲು ಮಂಜೂರಾತಿ ನೀಡಲಾಗಿದೆ.

2. ವೇತನ ಬಿಲ್ಲಿನಲ್ಲಿ ಕಟಾಯಿಸಿದ ಮೊತ್ತವನ್ನು ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ ಇವರಿಗೆ ಚೆಕ್ ಮೂಲಕ ಖಜಾನೆ ಅಧಿಕಾರಿಗಳು ಸಂದಾಯ ಮಾಡುವುದು ಹಾಗೂ ಈ ಕುರಿತು ಈ ಕೆಳಕಗೆ ಸೂಚಿಸಿರುವ ವಿಧಿ ವಿಧಾನಗಳಂತೆ ಕ್ರಮ ತೆಗೆದುಕೊಳ್ಳುವುದು:-

ಅ) ನೌಕರರ ಒಂದು ದಿನದ ವೇತನ ವಂತಿಗೆಯನ್ನು 2007ರ ಸೆಪ್ಟೆಂಬರ್ ತಿಂಗಳ ವೇತನದ ಬಿಲ್ಲಿನಲ್ಲಿ ಕಟಾವುಗೊಳಿಸುವ ಮೂಲಕ ವಸೂಲು ಮಾಡಲು ಆಯಾ ಕಛೇರಿ ಮುಖ್ಯಾಧಿಕಾರಿಗಳು ಮತ್ತು ಖಜಾನಾಧಿಕಾರಿಗಳು ಅಧಿಕಾರ ಪಡೆದಿರುತ್ತಾರೆ.

ಆ) ಒಂದು ದಿನದ ವೇತನವನ್ನು ವಂತಿಗೆಯಾಗಿ ಕೊಡಲಿಚ್ಛಿಸದ ನೌಕರರು ತಮ್ಮ ಅಸಮ್ಮತಿಯನ್ನು ಸಂಬಂಧಪಟ್ಟ ಬಟವಾಡೆ ಅಧಿಕಾರಿಗಳಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು ಮತ್ತು ಅಂತಹ ಲಿಖಿತ ಪತ್ರ ನೌಕರರಿಂದ 2007ರ ಸೆಪ್ಟೆಂಬರ್ ತಿಂಗಳಿನ ಸಂಬಳದ ಬಿಲ್ಲನ್ನು ಖಜಾನೆಗೆ ಸಲ್ಲಿಸುವ ದಿನಾಂಕದ ಒಳಗಾಗಿ ಬಂದಿದ್ದಲ್ಲಿ ಮಾತ್ರ ಅಂತಹ ನೌಕರನ/ಳ ಒಂದು ದಿನದ ವೇತನವನ್ನು 2007ರ ಸೆಪ್ಟೆಂಬರ್ ತಿಂಗಳಿನ ಬಿಲ್ಲಿನಲ್ಲಿ ಕಟಾವು ಮಾಡತಕ್ಕದ್ದಲ್ಲ.

ಇ) ಪ್ರತಿಯೊಬ್ಬ ನೌಕರನ/ಳ ವೇತನದಲ್ಲಿ ಕಟಾಯಿಸಿದ ಒಂದು ದಿನದ ವೇತನದ ಮೊತ್ತವನ್ನು ಬಿಲ್ಲಿನಲ್ಲಿ ಅವರ ಹೆಸರಿನ ಎದುರಿನಲ್ಲಿ "ಚನ್ನರಾಯನಪಟ್ಟಣದಲ್ಲಿ ರಾಜ್ಯ ಸರ್ಕಾರಿ ನೌಕರರ ಸಮುದಾಯ ಭವನದ ನಿರ್ಮಾಣಕ್ಕಾಗಿ ದೇಣಿಗೆ" ಎಂದು ಪ್ರತ್ಯೇಕ ಅಂಕಣದಲ್ಲಿ ಕಾಣಿಸಬೇಕು ಮತ್ತು ಸಮಗ್ರ ವೇತನ ಬಿಲ್ಲಿನಲ್ಲಿ ಕಡಿತಗೊಳಿಸಿದ ಒಟ್ಟು ಮೊತ್ತವನ್ನು ವೇತನ ಬಿಲ್ಲಿನ ಮುಖ ಪುಟದಲ್ಲಿ **"ಚನ್ನರಾಯಪಟ್ಟಣದಲ್ಲಿ ರಾಜ್ಯ ಸರ್ಕಾರಿ ನೌಕರರ ಸಮುದಾಯ ಭವನದ ನಿರ್ಮಾಣಕ್ಕಾಗಿ ದೇಣಿಗೆ"** ಎಂಬುದಾಗಿ ಸ್ಪಷ್ಟವಾಗಿ ನಮೂದಿಸಬೇಕು. ಜಿಲ್ಲಾ ಖಜಾನೆ ಅಧಿಕಾರಿಗಳು ಒಟ್ಟು ಮೊತ್ತವನ್ನು ಈ ಕೆಳಗೆ ನಮೂದಿಸಿರುವ ಲೆಕ್ಕ ಶೀರ್ಷಿಕೆಗೆ ವರ್ಗಾವಣೆ ಜಮಾ ಮೂಲಕ ಬಿಲ್ಲನ್ನು ಪಾವತಿ ಮಾಡಬೇಕು. ವೇತನ ಬಟವಾಡೆ ಮಾಡಲು ನಿವ್ವಳ ಮೊತ್ತಕ್ಕೆ ಚೆಕ್ಕನ್ನು ಬಟವಾಡೆ ಅಧಿಕಾರಿಗೆ ಅವರು ನೀಡಬೇಕು.

ಈ) ಚನ್ನರಾಯನಪಟ್ಟಣದಲ್ಲಿ ರಾಜ್ಯ ಸರ್ಕಾರಿ ನೌಕರರ ಸಮುದಾಯ ಭವನದ ನಿರ್ಮಾಣಕ್ಕಾಗಿ ಚನ್ನರಾಯನಪಟ್ಟಣ ತಾಲ್ಲೂಕಿನ ರಾಜ್ಯ ಸರ್ಕಾರಿ ಅಧಿಕಾರಿ/ನೌಕರರ ಒಂದು ದಿನದ ವೇತನವನ್ನು ಕಟಾಯಿಸಿ ಸದರಿ ಮೊತ್ತವನ್ನು **"8658-00-102-4-19-ಚನ್ನರಾಯಪಟ್ಟಣದಲ್ಲಿ ರಾಜ್ಯ ಸರ್ಕಾರಿ ನೌಕರರ ಸಮುದಾಯ ಭವನದ ನಿರ್ಮಾಣಕ್ಕಾಗಿ ದೇಣಿಗೆ, ಚನ್ನರಾಯಪಟ್ಟಣ, ಹಾಸನ ಜಿಲ್ಲೆ"** ಈ ಲೆಕ್ಕಶೀರ್ಷಿಕೆಗೆ ಜಮಾ ಮಾಡತಕ್ಕದ್ದು. ಹೀಗೆ ಜಮಾ ಮಾಡುವ ಒಟ್ಟು ಮೊತ್ತಕ್ಕೆ ಜಿಲ್ಲಾ ಖಜಾನೆ ಅಧಿಕಾರಿಯು "ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ" ಇವರಿಗೆ ಕ್ರೋಢೀಕೃತ ಮೊಬಲಗಿಗೆ ಚೆಕ್ಕನ್ನು ನೀಡುವುದು.

ಉ) 2007ರ ಸೆಪ್ಟೆಂಬರ್ ತಿಂಗಳಿನಲ್ಲಿ ಸ್ವೀಕರಿಸಲಾದ ವೇತನ ಬಿಲ್ಲುಗಳ ನಿರ್ವಹಣೆಯನ್ನು 2007ರ ಅಕ್ಟೋಬರ್ 10ನೇ ದಿನಾಂಕದೊಳಗೆ ಪೂರೈಸಬೇಕು. ಸೆಪ್ಟೆಂಬರ್ ತಿಂಗಳು ಅಂತ್ಯಗೊಂಡ ನಂತರ ಪಾವತಿ ಮಾಡಿದ ಬಿಲ್ಲುಗಳ ಪ್ರಕರಣಗಳಲ್ಲಿ ಅವುಗಳನ್ನು ಪಾವತಿ ಮಾಡಿದ ಒಂದು ವಾರದೊಳಗೆ ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ ಇವರಿಗೆ ಚೆಕ್ಕನ್ನು ಕಳುಹಿಸಬೇಕು ಹಾಗೂ ಹೀಗೆ ಕೈಗೊಂಡ ಕ್ರಮದ ಬಗ್ಗೆ ಒಂದು ಪ್ರತಿಯನ್ನು ಆರ್ಥಿಕ ಇಲಾಖೆಗೆ ಕಳುಹಿಸಬೇಕು.

ಊ) ಮಹಾಲೇಖಪಾಲರು ನೀಡಿದ ಅಧಿಕಾರ ಪತ್ರದ ಮೇಲೆ ತಮ್ಮ ವೇತನವನ್ನು ಖಜಾನೆಯಿಂದ ಪಡೆಯುವ ಅಧಿಕಾರಿಗಳೂ ಸಹ ಮೇಲೆ ಕಾಣಿಸಿದ ಕ್ರಮವನ್ನು ಪಾಲಿಸುವುದು.

ಋ) ಜಿಲ್ಲಾಧಿಕಾರಿ, ಹಾಸನ ಜಿಲ್ಲೆ ಅವರು ಈ ವಂತಿಗೆ ಹಣವನ್ನು ಉದ್ದೇಶಿತ ಯೋಜನೆಗಳಿಗೆ ಬಳಸಿಕೊಳ್ಳುವ ಅಧಿಕಾರ ಹೊಂದಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1581

**ಎನ್.ಟಿ. ನಾಯ್ಕ್**
ಸರ್ಕಾರದ ಜಂಟಿ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು-2)

## ಶಿಕ್ಷಣ ಸಚಿವಾಲಯ

**ವಿಷಯ:** ರಾಜ್ಯದಲ್ಲಿರುವ ಸಂಸ್ಕೃತ ಕಾಲೇಜು ಹಾಗೂ ಅರೇಬಿಕ್ ಕಾಲೇಜುಗಳನ್ನು ಉನ್ನತ ಶಿಕ್ಷಣ ವ್ಯಾಪ್ತಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:**
1 ಮಾನ್ಯ ಉನ್ನತ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆ ನಡವಳಿ ದಿನಾಂಕ: 25.6.2007.
2 ಆಯುಕ್ತರ ಶಿಫಾರಸ್ಸು ಪತ್ರ ಸಂಖ್ಯೆ: ಸಂಸ್ಕೃತ2 ಇತರೆ-10/2007-08, ದಿನಾಂಕ: 28.6.2007.

**ಪ್ರಸ್ತಾವನೆ:**

1. ರಾಜ್ಯದಲ್ಲಿನ ಸಂಸ್ಕೃತ ಕಾಲೇಜುಗಳು ಹಾಗೂ ಅರೇಬಿಕ್ ಕಾಲೇಜುಗಳು ಸಾರ್ವಜನಿಕ ಶಿಕ್ಷಣ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಪ್ರಸ್ತುತ ಇವುಗಳಲ್ಲಿನ ಕೋರ್ಸ್‌ಗಳಿಗೆ ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಪರೀಕ್ಷೆಗಳನ್ನು ನಡೆಸಿ ಅಂಕಪಟ್ಟಿ ಹಾಗೂ ಪ್ರಮಾಣ ಪತ್ರಗಳನ್ನು ನೀಡುತ್ತಿದೆ. ಆದರೆ ಸಂಸ್ಕೃತ ಕಾಲೇಜುಗಳು ನಡೆಸುತ್ತಿರುವ ವಿದ್ವತ್ ಮಾಧ್ಯಮ ಹಾಗೂ ವಿದ್ವತ್ ಉತ್ತಮ ತರಗತಿಗಳು ಪದವಿ ಹಾಗೂ ಸ್ನಾತಕೋತ್ತರ ಪದವಿಗೆ ಸಮಾನಾಂತರವಾಗಿದ್ದು ಇಂತಹ ಪದವೀಧರರಿಗೆ ವಿಶ್ವವಿದ್ಯಾಲಯಗಳು ಮಾನ್ಯತೆ ನೀಡಿರುವುದಿಲ್ಲ. ಅದಕ್ಕಾಗಿ ಕರ್ನಾಟಕ ರಾಜ್ಯದ ಸಂಸ್ಕೃತ ಕಾಲೇಜುಗಳ ಸಂಘದವರು ಸದರಿ ಕಾಲೇಜುಗಳನ್ನು ವಿಶ್ವವಿದ್ಯಾಲಯ ವ್ಯಾಪ್ತಿಗೆ ಒಳಪಡಿಸಿದಲ್ಲಿ ವಿಶ್ವವಿದ್ಯಾಲಯಗಳು ನೀಡುವ ಪ್ರಮಾಣ ಪತ್ರ ಮತ್ತು ಅಂಕ ಪಟ್ಟಿಯನ್ನು ಪಡೆದು ಕರ್ನಾಟಕ ಹಾಗೂ ಇತರೆ ರಾಜ್ಯಗಳಲ್ಲಿ ಉದ್ಯೋಗಾವಕಾಶಗಳನ್ನು ಪಡೆಯಲು ಅನುಕೂಲವಾಗುತ್ತದೆ ಎಂದು ಕೋರಿರುತ್ತಾರೆ. ಆದ್ದರಿಂದ ಸಂಸ್ಕೃತ ಹಾಗೂ ಅರೇಬಿಕ್ ಕಾಲೇಜುಗಳನ್ನು ಕಾಲೇಜು ಶಿಕ್ಷಣ ನಿರ್ದೇಶನಾಲಯ ವ್ಯಾಪ್ತಿಗೆ ಒಳಪಡಿಸುವಂತೆ ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ

2. ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 47 ಎಲ್ಎಸ್ಇ 2006, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2007**

3. ರಾಜ್ಯದಲ್ಲಿರುವ ಸಂಸ್ಕೃತ ಕಾಲೇಜುಗಳನ್ನು ಹಾಗೂ ಅರೇಬಿಕ್ ಕಾಲೇಜುಗಳನ್ನು ಅಂತಹ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಯೊಂದಿಗೆ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ವಿಭಾಗದ ವ್ಯಾಪ್ತಿಯಿಂದ ಸದರಿ ವಿಷಯವನ್ನು ಉನ್ನತ ಶಿಕ್ಷಣ ವ್ಯಾಪ್ತಿಯ ಆಯುಕ್ತರು ಕಾಲೇಜು ಶಿಕ್ಷಣ ಇಲಾಖೆಗೆ ತಕ್ಷಣದಿಂದ ವರ್ಗಾಯಿಸಿ ಈ ಆದೇಶವನ್ನು ಹೊರಡಿಸಿದೆ.

4. ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು–ಸಿ)ಯ ದಿನಾಂಕ: 13/16.08.2007ರ ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 28/ಸೇನಿನಿ 2007ರ ಅಭಿಪ್ರಾಯದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1616

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

**ಕಾರ್ಮಿಕ ಸಚಿವಾಲಯ**

**ವಿಷಯ:** 2007–08ನೇ ಸಾಲಿನಲ್ಲಿ ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಸ್ಥಾಪನೆ ಬಗ್ಗೆ

**ಓದಲಾಗಿದೆ:**
1 ಟಿಪ್ಪಣಿ ಸಂಖ್ಯೆ: ಸಿಎಂ/ಎಸ್‌ಸಿಎಮ್–2/1139/2007 ದಿನಾಂಕ 2ನೇ ಮೇ 2007.
2 ಸರ್ಕಾರಿ ಆದೇಶ ಸಂಖ್ಯೆ: ಕಾಇ 138 ಇಟಿಐ 2007 ದಿನಾಂಕ 13/08.2007.
3 ಸರ್ಕಾರಿ ಆದೇಶ ಸಂಖ್ಯೆ: ಕಾಇ 138 ಇಟಿಐ 2007 ದಿನಾಂಕ 18/08/2007.

**ಪ್ರಸ್ತಾವನೆ:**

ರಾಜ್ಯದ ಹತ್ತು ತಾಲ್ಲೂಕುಗಳಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು 2007–08ನೇ ಆಯವ್ಯಯದಲ್ಲಿ ರೂ. 300.00 ಲಕ್ಷಗಳನ್ನು ಒದಗಿಸಲಾಗಿತ್ತು.

ಮೇಲೆ (2) ಮತ್ತು (3)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ 2007–08ನೇ ಸಾಲಿನಲ್ಲಿ ರಾಜ್ಯದ ಮೊಸಳೆಹೊಸಹಳ್ಳಿ, ಕುಣಿಗಲ್, ಉದಯಪುರ, ಸಕಲೇಶಪುರ, ಸಾಲಿಗ್ರಾಮ ಸಕ್ಕರಾಯಪಟ್ಟಣ, ಗೋಕಾಕ, ಆಲೂರು, ಮಾಗಡಿ, ಶಿಡ್ಲಘಟ್ಟ, ಕಿತ್ತೂರು, ನವಲಗುಂದ, ಜಗಳೂರು, ಇಟಗಿ, ಬಿಡ್ಕಲ್‌ಕಟ್ಟೆ, ಹಾರೋಹಳ್ಳಿ, ಬೇಗೂರು, ಹರಿಹರಪುರ ಮತ್ತು ಭಟ್ಕಳಗಳಲ್ಲಿ ಕುರಗೋಡು, ಸಂಡೂರು, ಬಾಗೂರು, ಕೆಸ್ತೂರು ಮತ್ತು ಚಿನಕುರಳಿಗಳಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಹೊಸದಾಗಿ ಪ್ರಾರಂಭಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಈಗಾಗಲೇ ಪ್ರಾರಂಭಿಸಲು ಮಂಜೂರಾತಿ ನೀಡಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಪೈಕಿ ಕುರುಗೋಡು, ಬಳ್ಳಾರಿ ಜಿಲ್ಲೆ ಇಲ್ಲಿಗೆ ಬದಲಾಗಿ ಕುಡಿತಿನಿಯಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಸ್ಥಾಪಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 138 ಇಟಿಐ 2007 ಬೆಂಗಳೂರು, ದಿನಾಂಕ: 03.09.2007**

ಸರ್ಕಾರಿ ಆದೇಶ ಸಂಖ್ಯೆ: ಕಾಇ 138 ಇಟಿಐ 2007 ದಿನಾಂಕ: 18.08.2007 ಅನ್ನು ಭಾಗಶಃ ಮಾರ್ಪಡಿಸಿ ಕುರುಗೋಡು, ಬಳ್ಳಾರಿ ತಾಲ್ಲೂಕು ಇಲ್ಲಿಗೆ ಬದಲಾಗಿ ಕುಡಿತಿನಿ, ಬಳ್ಳಾರಿ ತಾಲ್ಲೂಕು ಇಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

ಉಳಿದ ಷರತ್ತುಗಳಲ್ಲಿ ಯಾವುದೆ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1617

**ವಿ. ಶ್ರೀರಾಮರೆಡ್ಡಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ, (ಉದ್ಯೋಗ ಮತ್ತು ತರಬೇತಿ)

**ವಸತಿ ಸಚಿವಾಲಯ**

**ವಿಷಯ:** ಕೇಂದ್ರ ಪುರಸ್ಕೃತ ಯೋಜನೆ ನರ್ಮ್ ಯೋಜನೆಯಡಿ ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆ (IHSDP)ಗೆ 2006–07ನೇ ಸಾಲಿನ ಕೇಂದ್ರದ ಪಾಲಿನ ಮೊದಲ ಕಂತಿನ ಹಣದ ಬಿಡುಗಡೆ ಬಗ್ಗೆ

**ಓದಲಾಗಿದೆ:**
1 ಕೇಂದ್ರ ಪುರಸ್ಕೃತ ಯೋಜನೆ/ಕೇಂದ್ರ ವಲಯ ಯೋಜನೆಗಳಿಗೆ ಅನುದಾನ ಬಿಡುಗಡೆಯಾದ ಬಗ್ಗೆ ಆರ್ಥಿಕ ಇಲಾಖೆಯ ಜಮಾ ದೃಢೀಕರಣ ಪತ್ರ ಸಂಖ್ಯೆ: ಆಇ 509 ಎಫ್‌ಆರ್‌ಸಿ2007 ದಿನಾಂಕ 25–04–2007.
2 ಕೇಂದ್ರ ಪುರಸ್ಕೃತ ಯೋಜನೆ/ಕೇಂದ್ರ ವಲಯ ಯೋಜನೆಗಳಿಗೆ ಅನುದಾನ ಬಿಡುಗಡೆಯಾದ ಬಗ್ಗೆ ಆರ್ಥಿಕ ಇಲಾಖೆಯ ಜಮಾ ದೃಢೀಕರಣ ಪತ್ರ ಸಂಖ್ಯೆ: ಆಇ 606 ಎಫ್‌ಆರ್‌ಸಿ 2007, ದಿನಾಂಕ 30–05–2007.

3 ಕೇಂದ್ರ ವಸತಿ ಮತ್ತು ನಗರ ಬಡತನ ನಿರ್ಮೂಲನ ಮಂತ್ರಾಲಯದ ಕಛೇರಿ ಜ್ಞಾಪನ ಸಂಖ್ಯೆ: N-11028/8/2007/IHSDP/JNNURM, ದಿನಾಂಕ: 28–03–07

4 ಕೇಂದ್ರ ವಸತಿ ಮತ್ತು ನಗರ ಬಡತನ ನಿರ್ಮೂಲನ ಮಂತ್ರಾಲಯದ ಕಛೇರಿ ಜ್ಞಾಪನ ಸಂಖ್ಯೆ: 11028/4/2007/IHSDP/JNNURM, ದಿನಾಂಕ: 20–04–07.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಜಮಾ ದೃಢೀಕರಣ ಪತ್ರದಲ್ಲಿ ಭಾರತ ಸರ್ಕಾರವು ನರ್ಮ್ ಯೋಜನೆಯಡಿ ಅನುಷ್ಠಾನಗೊಳಿಸಲಾಗುವ 'ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆಗೆ (Integrated Housing and Slum Development Programme-IHSDP)' ಕೇಂದ್ರದ ಪಾಲಿನ ಶೇ 50ನ್ನು ಮೊದಲ ಕಂತಾಗಿ 2006–07 ಮತ್ತು 2007–08ನೇ ಸಾಲಿನಲ್ಲಿ ಸಿಂಧನೂರು ಮತ್ತು ಸವದತ್ತಿ IHSDP ಯೋಜನೆಗಳ ಅನುಷ್ಠಾನಕ್ಕಾಗಿ ರೂ. 79.59 ಮತ್ತು 601.86 ಲಕ್ಷವನ್ನು ಬಿಡುಗಡೆ ಮಾಡಿರುತ್ತದೆ.

ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆಯನ್ನು ಕೇಂದ್ರದ ಮಾರ್ಗಸೂಚಿಯಂತೆ 80:20 ಅನುಪಾತದಲ್ಲಿ (ಕೇಂದ್ರ–ಶೇ–80) ಮತ್ತು ರಾಜ್ಯ/ನಗರ ಸ್ಥಳೀಯ ಸಂಸ್ಥೆಗಳು (ULB)/ ಪ್ಯಾರಾಸ್ಟೇಟಲ್ (Parastatal) (ಶೇ. 20) ರಾಜ್ಯದಲ್ಲಿ ಅನುಷ್ಠಾನಗೊಳಿಸಬೇಕಾಗಿದ್ದು, ಕನಿಷ್ಟ ಶೇ. 12ರಷ್ಟನ್ನು ಫಲಾನುಭವಿಗಳಿಂದ (ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ/ ಇತರೆ ಹಿಂದುಳಿದ ವರ್ಗ/ಅಂಗವಿಕಲರು ಮತ್ತು ಅಶಕ್ತ ವರ್ಗಗಳಿಗೆ ಶೇ. 10 ರಷ್ಟು) ವಂತಿಕೆಯನ್ನು ಪಡೆಯಬೇಕಾಗಿರುತ್ತದೆ. (ಯೋಜನೆಯ ಅಂಗವಾದ O&M, IEC ಮತ್ತು A&S ವೆಚ್ಚಗಳನ್ನು ಮೊದಲಿಗೆ ರಾಜ್ಯವು ಭರಿಸಿ, ಯೋಜನಾ ಅನುಷ್ಠಾನಾನಂತರ ಹಣ ಬಳಕೆ ಪ್ರಮಾಣ ಪತ್ರವನ್ನು ಅನುಷ್ಠಾನ ಸಂಸ್ಥೆಯು ರಾಜ್ಯದ ಮುಖಾಂತರ ಕೇಂದ್ರಕ್ಕೆ ಸಲ್ಲಿಸಿದ ಮೇಲೆ ಕೇಂದ್ರವು ಮರುಪಾವತಿಸಲಿದೆ)

ಮೇಲೆ ಓದಲಾದ ಕ್ರಮ ಸಂಖ್ಯೆ (3) ಮತ್ತು (4)ರಲ್ಲಿ ಕೇಂದ್ರ ವಸತಿ ಮತ್ತು ನಗರ ಬಡತನ ನಿರ್ಮೂಲನ ಮಂತ್ರಾಲಯದ (JNNURM ಮಿಷನ್ ನಿರ್ದೇಶನಾಲಯ) ಕಛೇರಿ ಜ್ಞಾಪನಗಳಲ್ಲಿ ದಿನಾಂಕ: 27.02.2007 ಮತ್ತು 21.03.2007ರಲ್ಲಿ ನಡೆದ 11ನೇ ಮತ್ತು 12ನೇ ಕೇಂದ್ರ ಮಂಜೂರಾತಿ ಸಮಿತಿ ಸಭೆಯು ರಾಜ್ಯದ ಸಿಂಧನೂರು ಮತ್ತು ಸವದತ್ತಿ ಪಟ್ಟಣಗಳ IHSDP ಯೋಜನೆಗಳಿಗೆ ಮಂಜೂರಾತಿ ನೀಡಿರುತ್ತದೆ. ಮಂಜೂರಾಗಿರುವ ಯೋಜನೆಗಳ ವಿವರ ಈ ಕೆಳಗಿನಂತಿರುತ್ತದೆ.

Rs. in lakhs

| Sl. No. | Name of the City | | Project name/ Components | Total Project cost | Central Share | State share | 50% of Central Share |
|---|---|---|---|---|---|---|---|
| 1. | Sindhanur | | IHSDP Scheme at Sindhanur Karnataka | | | | |
| | | A | Housing-1005, units @ Rs. 1,00,000/- per DU, in-situ, single storied, built-up area 25 sq. m with two rooms and allotment will be in the Name of the beneficiaries. | 1005.00 | 643.20 | 361.80 | 321.60 |
| | | B | i) Community Centre | 170.00 | 60.00 | 15.00 | 30.00 |
| | | | ii) Roads/Culverts | 87.04 | 69.63 | 17.41 | 34.82 |
| | | | iii) Storm water drains | 208.24 | 166.59 | 41.65 | 83.30 |
| | | | iv) UGD | 88.77 | 71.02 | 17.75 | 35.51 |
| | | | v) Water supply | 105.00 | 84.00 | 21.00 | 42.00 |
| | | | vi) Street Lighting/ Transformers | 41.60 | 32.28 | 8.32 | 16.64 |
| | | | **Sub-Total of B** | **700.65** | **560.52** | **140.13** | **280.26** |

| | | | | | | | |
|---|---|---|---|---|---|---|---|
| | | C | i) O&M | 140.16 | 0.00 | 140.16 | 0.00 |
| | | | ii) IEC and A&S | 120.37 | 0.00 | 120.37 | 0.00 |
| | | | **Sub-Total of C** | **260.53** | **0.00** | **260.53** | **0.00** |
| | | | **Total (A+B+C)** | **1966.18** | **1203.72** | **762.46** | **601.86** |
| 2. | Saundatti | | IHSDP scheme at Saundatti, Karnataka | | | | |
| | | A | Housing-145 units @ Rs. 1,00,000/- per DU, relocation, single storied built-up area 25 sq.m with two rooms and allotment will be in the name of the beneficiaries. | 145.00 | 92.80 | 52.20 | 46.40 |
| | | B | i) Community Centre | 25.00 | 20.00 | 5.00 | 10.00 |
| | | | ii) Roads/Culverts | 12.51 | 10.01 | 2.50 | 5.00 |
| | | | iii) Storm water drains | 14.16 | 11.33 | 2.83 | 5.66 |
| | | | iv) UGD/Septic tanks | 15.44 | 12.35 | 3.09 | 6.18 |
| | | | v) Water supply | 10.00 | 8.00 | 2.00 | 4.00 |
| | | | vi) Street Lighting/Transformers | 5.87 | 4.70 | 1.17 | 2.35 |
| | | | **Sub-Total of B** | **82.98** | **66.38** | **16.60** | **33.19** |
| | | C | i) O&M | 11.60 | 0.00 | 11.60 | 0.00 |
| | | | ii) IEC and A&S | 15.92 | 0.00 | 15.92 | 0.00 |
| | | | **Total (A+B+C)** | **255.50** | **159.18** | **96.32** | **79.59** |
| | | | **Sub Total of C** | **27.52** | **0.00** | **27.52** | **0.00** |
| | | | **Grand Total for Karnataka (2 Projects)** | **2221.68** | **1362.90** | **858.78** | **681.45** |

ಕೇಂದ್ರ ಸರ್ಕಾರ ಬಿಡುಗಡೆಗೊಳಿಸಿರುವ ಮೊತ್ತವನ್ನು ಕೇಂದ್ರದ ಮಾರ್ಗಸೂಚಿಯನ್ವಯ, IHSDP ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಸ್ಥೆಗೆ ನೋಡಲ್ ಏಜೆನ್ಸಿ ಮುಖಾಂತರ ಬಿಡುಗಡೆ ಮಾಡಬೇಕಾಗಿರುತ್ತದೆ. ಸದರಿ ಯೋಜನೆಗೆ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ, ಬೆಂಗಳೂರು ಅನುಷ್ಠಾನ ಸಂಸ್ಥೆ-ನೋಡಲ್ ಏಜೆನ್ಸಿ ಆಗಿರುತ್ತದೆ. ಆದಕಾರಣ, ರಾಜ್ಯ ಆರ್ಥಿಕ ಇಲಾಖೆಯು ನೀಡಿರುವ ಜಮಾ ದೃಢೀಕರಣ ಪತ್ರದಲ್ಲಿ ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿರುವ ರೂ. 79.59 ಲಕ್ಷ ಮತ್ತು 601.86ಲಕ್ಷಗಳನ್ನು ನೋಡಲ್ ಏಜೆನ್ಸಿಗೆ ಬಿಡುಗಡೆ ಮಾಡಬೇಕಾಗಿರುತ್ತದೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಕೇಂದ್ರ ಸರ್ಕಾರ ಬಿಡುಗಡೆಗೊಳಿಸಿರುವ ಕೇಂದ್ರದ ಪಾಲಿನ ಶೇ. 50ರ ಮೊದಲ ಕಂತನ್ನು ನೋಡಲ್ ಏಜೆನ್ಸಿಯಾದ ಕರ್ನಾಟಕ ಕೊಳೆಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 60 ಕೊಮಂಲೆ 2005 (ಭಾ), ಬೆಂಗಳೂರು, ದಿನಾಂಕ: 06.08.2007**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ 2006-07ನೇ ಸಾಲಿಗೆ ಕೇಂದ್ರ ಸರ್ಕಾರವು ಈ ಕೆಳಗೆ ಕಾಣಿಸಿರುವ ಸವದತ್ತಿ ಮತ್ತು ಸಿಂಧನೂರು IHSDP ಯೋಜನೆಗಳ ಅನುಷ್ಠಾನಕ್ಕಾಗಿ ಬಿಡುಗೆ ಮಾಡಿರುವ ಕೇಂದ್ರದ ಪಾಲಿನ ಶೇ. 50ರ ಮೊದಲ ಕಂತಾದ ರೂ. 79.59 ಲಕ್ಷ (ಎಪ್ಪತ್ತೊಂಭತ್ತು ಲಕ್ಷ ಮತ್ತು ಐವತ್ತೊಂಭತ್ತು ಸಾವಿರ ಮಾತ್ರ) ಮತ್ತು 601.86 (ಆರು ನೂರು ಒಂದು ಲಕ್ಷ ಮತ್ತು ಎಂಭತ್ತಾರು ಸಾವಿರ ರೂಪಾಯಿಗಳು ಮಾತ್ರ)ಗಳನ್ನು (ಒಟ್ಟು ರೂ. 681.45 ಲಕ್ಷ) ನೋಡಲ್ ಏಜೆನ್ಸಿ ಮತ್ತು ಅನುಷ್ಠಾನ ಸಂಸ್ಥೆಯಾದ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

(ರೂ. ಲಕ್ಷಗಳಲ್ಲಿ)

| ನಗರ/ಪಟ್ಟಣ | ಯೋಜನೆಯ ಹೆಸರು | ಒಟ್ಟು ಯೋಜನಾ ವೆಚ್ಚ | ಕೇಂದ್ರದ ಪಾಲು | ರಾಜ್ಯದ ಪಾಲು | **ಕೇಂದ್ರದ ಪಾಲಿನ (ಶೇ. 50%) ಮೊದಲ ಕಂತು** |
|---|---|---|---|---|---|
| 1. ಸಿಂಧನೂರು | IHSDP | 1966.18 | 1203.72 | 762.46 | **601.86** |

| | | | | | |
|---|---|---|---|---|---|
| 2. ಸವದತ್ತಿ | IHSDP | 255.50 | 159.18 | 96.32 | 79.59 |
| ಒಟ್ಟು | | 2221.68 | 1362.90 | 858.78 | 681.45 |

ಮೇಲ್ಕಂಡ ಯೋಜನೆಗಳಿಗೆ ಮಾಡಲಾಗುವ ಖರ್ಚನ್ನು ಸಮಗ್ರ ವಸತಿ ಮತ್ತು ಕೊಳಚೆ ಸುಧಾರಣ (IHSDP) ಸಹಾಯಧನ ಲೆಕ್ಕಶೀರ್ಷಿಕೆ 2217–04–191–2–03 ಯಡಿ ಭರಿಸುವುದು.

ಈ ಮೊತ್ತವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಮೇಲು ಸಹಿ ಪಡೆದ ನಂತರ ಪಡೆಯತಕ್ಕದ್ದು.

ಈ ಸಹಾಯಧನವು ಈ ಕೆಳಕಂಡ ಷರತ್ತಿಗೊಳಪಟ್ಟಿರುತ್ತದೆ.

1. 21.03.2007ರಲ್ಲಿ ನಡೆದ CSC ಸಭೆಯ ನಡವಳಿಯ ಕಂಡಿಕೆ 8.1ರಲ್ಲಿ ವಿಧಿಸಿರುವ ಹಾಗೂ ದಿನಾಕ: 27.02.2007ರಲ್ಲಿ ನಡೆದ CSC ಸಭೆಯ ನಡವಳಿಯ ಕಂಡಿಕೆ 7.3ಲ್ಲಿ ವಿಧಿಸಿರುವ (i) ರಿಂದ (vi) ರ ಷರತ್ತುಗಳನ್ನು ತಪ್ಪದೇ ಪಾಲಿಸತಕ್ಕದ್ದು.

2. ನೋಡಲ್ ಏಜೆನ್ಸಿಯು ಫಲಾನುಭವಿಗಳಿಂದ ವಂತಿಕೆಯು ನಿಯಮಿತವಾಗಿ ಪಾವತಿಯಾಗುವಂತೆ ಕ್ರಮ ವಹಿಸತಕ್ಕದ್ದು.

3. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಬಿಡುಗಡೆ ಮಾಡುವ ಅನುದಾನಗಳಿಗೆ ಮತ್ತು O&M, IEC ಮತ್ತು A&S ವೆಚ್ಚಗಳಿಗೆ ಮರುಪಾವತಿಗಾಗಿ ನಿಗದಿತ ಅವಧಿಯೊಳಗೆ ಬಳಕೆ ಪ್ರಮಾಣ ಪತ್ರಗಳನ್ನು ರಾಜ್ಯದ ಮುಖಾಂತರ ಕೇಂದ್ರ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಈಗ ಬಿಡುಗಡೆ ಮಾಡಲಾಗಿರುವ ಹಣವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ IHSDP ಯೋಜನೆಗೆ ಸಂಬಂಧಿಸಿದಂತೆ ಕಾಲಕಾಲಕ್ಕೆ ಹೊರಡಿಸಲಾಗುವ ಮಾರ್ಗಸೂಚಿಯಂತೆ ಅನುಷ್ಠಾನಗೊಳಿಸತಕ್ಕದ್ದು ಮತ್ತು ಅನುಷ್ಠಾನದ ಹಂತದ ಬಗ್ಗೆ ಕಾಲಕಾಲ್ಕಕೆ ವರದಿಗಳನ್ನು ರಾಜ್ಯ ಸರ್ಕಾರಕ್ಕೆ / ಕೇಂದ್ರ ವಸತಿ ಮತ್ತು ನಗರ ಬಡತನ ನಿರ್ಮೂಲನ ಮಂತ್ರಾಲಯಕೆ ನೀಡತಕ್ಕದ್ದು.

5. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.

6. ಸರ್ಕಾರಕ್ಕೆ ಆಡಿಟ್ ವರದಿಯನ್ನು ನಿಗದಿತ ಸಮಯಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: FD 9 TFP 2004, ದಿನಾಂಕ: 17.08.2004ರಲ್ಲಿ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತ ಮಾಡಲಾಗಿರುವ ಸೂಚನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಆರ್. ನಾಗರಾಜ**
ಪೀಠಾಧಿಕಾರಿ–4
ವಸತಿ ಇಲಾಖೆ

**ವಿಷಯ:** ಕೇಂದ್ರ ಪುರಸ್ಕೃತ ಯೋಜನೆ ನರ್ಮ್ ಯೋಜನೆಯಡಿ ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆ (IHSDP)ಗೆ 2006–07ನೇ ಸಾಲಿನ ಕೇಂದ್ರದ ಪಾಲಿನ ಮೊದಲ ಕಂತಿನ ಹಣದ ಬಿಡುಗಡೆ ಬಗ್ಗೆ

**ಓದಲಾಗಿದೆ:**
1 ಕೇಂದ್ರ ಪುರಸ್ಕೃತ ಯೋಜನೆ/ಕೇಂದ್ರ ವಲಯ ಯೋಜನೆಗಳಿಗೆ ಅನುದಾನ ಬಿಡುಗಡೆಯಾದ ಬಗ್ಗೆ ಆರ್ಥಿಕ ಇಲಾಖೆಯ ಜಮಾ ದೃಢೀಕರಣ ಪತ್ರ ಸಂಖ್ಯೆ: ಆಇ 440 ಎಫ್‌ಆರ್‌ಸಿ2007 ದಿನಾಂಕ 07–04–2007.
2 ಕೇಂದ್ರ ವಸತಿ ಮತ್ತು ನಗರ ಬಡತನ ನಿರ್ಮೂಲನ ಮಂತ್ರಾಲಯದ ಕಛೇರಿ ಜ್ಞಾಪನ ಸಂಖ್ಯೆ: N-11028/4/2007/IHSDP/JNNURM, ದಿನಾಂಕ: 07–03–07

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಜಮಾ ದೃಢೀಕರಣ ಪತ್ರದಲ್ಲಿ ಭಾರತ ಸರ್ಕಾರವು ನರ್ಮ್ ಯೋಜನೆಯಡಿ ಅನುಷ್ಠಾನಗೊಳಿಸಲಾಗುವ 'ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆಗೆ (Integrated Housing and Slum Development Programme-IHSDP)' ಕೇಂದ್ರದ ಪಾಲಿನ ಶೇ 50ನ್ನು ಮೊದಲ ಕಂತಾಗಿ 2006–07ನೇ ಸಾಲಿನಲ್ಲಿ ಬಳ್ಳಾರಿ, ಮುಳುಬಾಗಿಲು ಮತ್ತು ರಾಮನಗರ IHSDP ಯೋಜನೆಗಳ ಅನುಷ್ಠಾನಕ್ಕಾಗಿ ರೂ. 1413.49 ಲಕ್ಷವನ್ನು ಬಿಡುಗಡೆ ಮಾಡಿರುತ್ತದೆ.

ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆಯನ್ನು ಕೇಂದ್ರದ ಮಾರ್ಗಸೂಚಿಯಂತೆ 80:20 ಅನುಪಾತದಲ್ಲಿ (ಕೇಂದ್ರ–ಶೇ–80) ಮತ್ತು ರಾಜ್ಯ/ನಗರ ಸ್ಥಳೀಯ ಸಂಸ್ಥೆಗಳು (ULB)/ ಪ್ಯಾರಾಸ್ಟೇಟಲ್ (Parastatal) (ಶೇ. 20) ರಾಜ್ಯದಲ್ಲಿ ಅನುಷ್ಠಾನಗೊಳಿಸಬೇಕಾಗಿದ್ದು, ಕನಿಷ್ಠ ಶೇ. 12ರಷ್ಟನ್ನು ಫಲಾನುಭವಿಗಳಿಂದ (ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ/ ಇತರೆ ಹಿಂದುಳಿದ ವರ್ಗ/ಅಂಗವಿಕಲರು ಮತ್ತು ಅಶಕ್ತ ವರ್ಗಗಳಿಗೆ ಶೇ. 10 ರಷ್ಟು) ವಂತಿಕೆಯನ್ನು ಪಡೆಯಬೇಕಾಗಿರುತ್ತದೆ. (ಯೋಜನೆಯ ಅಂಗವಾದ O&M, IEC ಮತ್ತು A&S ವೆಚ್ಚಗಳನ್ನು ಮೊದಲಿಗೆ ರಾಜ್ಯವು ಭರಿಸಿ, ಯೋಜನಾ

ಅನುಷ್ಠಾನಾನಂತರ ಹಣ ಬಳಕೆ ಪ್ರಮಾಣ ಪತ್ರವನ್ನು ಅನುಷ್ಠಾನ ಸಂಸ್ಥೆಯು ರಾಜ್ಯದ ಮುಖಾಂತರ ಕೇಂದ್ರಕ್ಕೆ ಸಲ್ಲಿಸಿದ ಮೇಲೆ ಕೇಂದ್ರವು ಮರುಪಾವತಿಸಲಿದೆ)

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಕೇಂದ್ರ ವಸತಿ ಮತ್ತು ನಗರ ಬಡತನ ನಿರ್ಮೂಲನ ಮಂತ್ರಾಲಯದ (JNNURM ಮಿಷನ್ ನಿರ್ದೇಶನಾಲಯ) ಕಛೇರಿ ಜ್ಞಾಪನಗಳಲ್ಲಿ ದಿನಾಂಕ: 27.02.2007 ರಲ್ಲಿ ನಡೆದ 11ನೇ ಕೇಂದ್ರ ಮಂಜೂರಾತಿ ಸಮಿತಿ ಸಭೆಯು ರಾಜ್ಯದ ಬಳ್ಳಾರಿ, ಮುಳಬಾಗಿಲು ಮತ್ತು ರಾಮನಗರ ಪಟ್ಟಣಗಳ IHSDP ಯೋಜನೆಗಳಿಗೆ ಮಂಜೂರಾತಿ ನೀಡಿರುತ್ತದೆ. ಮಂಜೂರಾಗಿರುವ ಯೋಜನೆಗಳ ವಿವರ ಈ ಕೆಳಗಿನಂತಿರುತ್ತದೆ.

Rs. in lakhs

| Sl. No. | Name of the City | | Project name/ Components | Total Project cost | Central Share | State share | 50% of Central Share |
|---|---|---|---|---|---|---|---|
| 1. | Bellary | | IHSDP Scheme at Bellary Karnataka | | | | |
| | | A | Housing-520, units @ Rs. 1,00,000/- per DU, in-situ, single storied, built-up area 25 sq. m with two rooms and allotment will be in the name of the beneficiaries. | 520.00 | 332.80 | 187.20 | 166.40 |
| | | B | i) Community Centre | 75.00 | 60.00 | 15.00 | 30.00 |
| | | | ii) Roads/Culverts | 42.82 | 34.26 | 8.56 | 17.13 |
| | | | iii) Storm water drains | 37.90 | 30.32 | 7.58 | 15.16 |
| | | | iv) UGD | 26.65 | 21.32 | 5.33 | 10.66 |
| | | | v) Water supply | 30.00 | 24.00 | 6.00 | 12.00 |
| | | | vi) Street Lighting/ Transformers | 16.43 | 13.14 | 3.29 | 6.57 |
| | | | vii) Parks | 10.00 | 8.00 | 2.00 | 4.00 |
| | | | viii) Community Toilets | 16.00 | 12.80 | 3.20 | 6.40 |
| | | | **Sub-Total of B** | **254.80** | **203.84** | **50.96** | **101.92** |
| | | C | i) O&M | 37.96 | 0.00 | 37.96 | 0.00 |
| | | | ii) IEC and A&S | 53.66 | 0.00 | 53.66 | 0.00 |
| | | | **Sub-Total of C** | **91.62** | **0.00** | **91.62** | **0.00** |
| | | | **Total (A+B+C)** | **866.42** | **536.64** | **329.78** | **268.32** |
| 2. | Mulabagilu | | IHSDP scheme at Mulabagilu, Karnataka | | | | |
| | | A | Housing-600 units @ Rs. 1,00,000/- per DU, relocation, single storied built-up area 25 sq.m with two rooms and allotment will be in the name of the beneficiaries. | 600.00 | 384.00 | 216.00 | 192.00 |
| | | B | i) Community Centre | 50.00 | 40.00 | 10.00 | 20.00 |
| | | | ii) Roads/Culverts | 56.50 | 45.20 | 11.30 | 22.60 |
| | | | iii) Storm water drains | 107.27 | 85.82 | 21.45 | 42.91 |
| | | | iv) UGD/Septic tanks | 46.30 | 37.04 | 9.26 | 18.52 |
| | | | v) Water supply | 30.00 | 24.00 | 6.00 | 12.00 |
| | | | vi) Street Lighting/Transformers | 16.88 | 13.50 | 3.38 | 6.75 |
| | | | vii) Street | 8.10 | 6.48 | 1.62 | 3.24 |

| | | | | | | | |
|---|---|---|---|---|---|---|---|
| | | | Lighting/Transformers | | | | |
| | | | viii) Community Toilets | 8.10 | 6.48 | 1.62 | 3.24 |
| | | | **Sub-Total of B** | **315.05** | **252.04** | **63.01** | **126.02** |
| | | C | i) O&M | 63.1 | 0.00 | 63.01 | 0.00 |
| | | | ii) IEC and A&S | 63.60 | 0.00 | 63.60 | 0.00 |
| | | | **Sub Total of C** | **12.61** | **0.00** | **126.61** | **0.00** |
| | | | **Total (A+B+C)** | **1041.66** | **636.04** | **405.62** | **318.02** |
| 3. | Ramanagara | | IHSDP scheme at Ramanagara, Karnataka | | | | |
| | | A | Housing-1800 units @ Rs. 1,00,000/- per DU, relocation, single storied built-up area 25 sq.m with two rooms and allotment will be in the name of the beneficiaries. | 1800.00 | 1152.00 | 648.00 | 576.00 |
| | | B | i) Community Centre | 100.00 | 80.00 | 20.00 | 40.00 |
| | | | ii) Roads/Culverts | 97.18 | 77.74 | 19.44 | 38.87 |
| | | | iii) Storm water drains | 261.38 | 209.10 | 52.28 | 104.55 |
| | | | iv) UGD/Septic tanks | 70.92 | 56.74 | 14.18 | 28.37 |
| | | | v) Water supply | 60.00 | 48.00 | 12.00 | 24.00 |
| | | | vi) Street Lighting/Transformers | 38.39 | 30.71 | 7.68 | 15.36 |
| | | | **Sub-Total of B** | **627.87** | **502.30** | **125.57** | **251.15** |
| | | C | i) O&M | 122..58 | 0.00 | 122.58 | 0.00 |
| | | | ii) IEC and A&S | 165.43 | 0.00 | 165.43 | 0.00 |
| | | | **Sub Total of C** | **288.01** | **0.00** | **288.01** | **0.00** |
| | | | **Total (A+B+C)** | **2715.88** | **1654.30** | **1061.58** | **827.15** |
| | | | **Grand Total for Karnataka (2 Projects)** | **4623.96** | **2826.98** | **1796.98** | **1413.49** |

ಕೇಂದ್ರ ಸರ್ಕಾರ ಬಿಡುಗಡೆಗೊಳಿಸಿರುವ ಮೊತ್ತವನ್ನು ಕೇಂದ್ರದ ಮಾರ್ಗಸೂಚಿಯನ್ವಯ IHSDP ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಸ್ಥೆಗೆ ನೋಡಲ್ ಏಜೆನ್ಸಿ ಮುಖಾಂತರ ಬಿಡುಗಡೆ ಮಾಡಬೇಕಾಗಿರುತ್ತದೆ. ಸದರಿ ಯೋಜನೆಗೆ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ, ಬೆಂಗಳೂರು ಅನುಷ್ಠಾನ ಸಂಸ್ಥೆ–ನೋಡಲ್ ಏಜೆನ್ಸಿ ಆಗಿರುತ್ತದೆ. ಆದಕಾರಣ, ರಾಜ್ಯ ಆರ್ಥಿಕ ಇಲಾಖೆಯು ನೀಡಿರುವ ಜಮಾ ದೃಢೀಕರಣ ಪತ್ರದಲ್ಲಿ ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿರುವ ರೂ. 1413.49 ಲಕ್ಷಗಳನ್ನು ನೋಡಲ್ ಏಜೆನ್ಸಿಗೆ ಬಿಡುಗಡೆ ಮಾಡಬೇಕಾಗಿರುತ್ತದೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಕೇಂದ್ರ ಸರ್ಕಾರ ಬಿಡುಗಡೆಗೊಳಿಸಿರುವ ಕೇಂದ್ರದ ಮೇಲಿನ ಶೇ. 50ರ ಮೊದಲ ಕಂತನ್ನು ನೋಡಲ್ ಏಜೆನ್ಸಿಯಾದ ಕರ್ನಾಟಕ ಕೊಳೆಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 60 ಕೊಮಂಲೆ 2005 (ಭಾ), ಬೆಂಗಳೂರು, ದಿನಾಂಕ: 06.08.2007**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ 2006–07ನೇ ಸಾಲಿಗೆ ಕೇಂದ್ರ ಸರ್ಕಾರವು ಈ ಕೆಳಗೆ ಕಾಣಿಸಿರುವ ಬಳ್ಳಾರಿ, ಮುಳಬಾಗಿಲು ಮತ್ತು ರಾಮನಗರ IHSDP ಯೋಜನೆಗಳ ಆನುಷ್ಠಾನಕ್ಕಾಗಿ ಬಿಡುಗಡೆ ಮಾಡಿರುವ ಕೇಂದ್ರದ ಪಾಲಿನ ಶೇ. 50ರ ಮೊದಲ ಕಂತಾದ ರೂ. 1413.49 ಲಕ್ಷ (ಒಂದು ಸಾವಿರದ ನಾಲ್ಕೂನೂರ ಹದಿಮೂರು ಲಕ್ಷ ಮತ್ತು ನಲವತ್ತೊಂಭತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ನೋಡಲ್ ಏಜೆನ್ಸಿ ಮತ್ತು ಅನುಷ್ಠಾನ ಸಂಸ್ಥೆಯಾದ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಅದೇಶಿಸಿದೆ.

| ನಗರ/ಪಟ್ಟಣ | ಯೋಜನೆಯ ಹೆಸರು | ಒಟ್ಟು ಯೋಜನಾ ವೆಚ್ಚ | ಕೇಂದ್ರದ ಪಾಲು | ರಾಜ್ಯದ ಪಾಲು | ಕೇಂದ್ರದ ಪಾಲಿನ (ಶೇ. 50%) ಮೊದಲ ಕಂತು |
|---|---|---|---|---|---|
| 1. ಬಳ್ಳಾರಿ | IHSDP | 866.42 | 536.64 | 329.78 | **268.32** |
| 2. ಮುಳಬಾಗಿಲು | IHSDP | 1041.66 | 636.04 | 405.62 | **318.02** |
| 3. ರಾಮನಗರ | IHSDP | 2715.88 | 1654.30 | 1061.58 | **827.15** |
| ಒಟ್ಟು | | 4623.96 | 2826.98 | 1796.98 | **1413.49** |

ಮೇಲ್ಕಂಡ ಯೋಜನೆಗಳಿಗೆ ಮಾಡಲಾಗುವ ಖರ್ಚನ್ನು ಸಮಗ್ರ ವಸತಿ ಮತ್ತು ಕೊಳಚೆ ಸುಧಾರಣ (IHSDP) ಸಹಾಯಧನ ಲೆಕ್ಕಶೀರ್ಷಿಕೆ 2217-04-191-2-03 ಯಡಿ ಭರಿಸುವುದು.

ಈ ಮೊತ್ತವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಮೇಲು ಸಹಿ ಪಡೆದ ನಂತರ ಪಡೆಯತಕ್ಕದ್ದು.

ಈ ಸಹಾಯಧನವು ಈ ಕೆಳಕಂಡ ಷರತ್ತಿಗೊಳಪಟ್ಟಿರುತ್ತದೆ.

1. 27.02.2007ರ 11ನೇ CSC ಸಭೆಯ ನಡವಳಿಯ ಕಂಡಿಕೆ 7.3ರಲ್ಲಿ ವಿಧಿಸಿರುವ (i) ರಿಂದ (vi) ರ ಷರತ್ತುಗಳನ್ನು ತಪ್ಪದೇ ಪಾಲಿಸತಕ್ಕದ್ದು.

2. ನೋಡಲ್ ಏಜೆನ್ಸಿಯ ಫಲಾನುಭವಿಗಳಿಂದ ವಂತಿಕೆಯು ನಿಯಮಿತವಾಗಿ ಪಾವತಿಯಾಗುವಂತೆ ಕ್ರಮ ವಹಿಸತಕ್ಕದ್ದು.

3. ಕೇಂದ್ರ ಹಾಗೂ ರಾಜ್ಯದ ಸರ್ಕಾರಗಳು ಬಿಡುಗಡೆ ಮಾಡುವ ಅನುದಾನಗಳಿಗೆ ಮತ್ತು O&M, IEC ಮತ್ತು ಮತ್ತು A&S ವೆಚ್ಚಗಳಿಗೆ ಮರುಪಾವತಿಗಾಗಿ ನಿಗದಿತ ಅವಧಿಯೊಳಗೆ ಬಳಕೆ ಪ್ರಮಾಣ ಪತ್ರಗಳನ್ನು ರಾಜ್ಯದ ಮುಖಾಂತರ ಕೇಂದ್ರ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಈಗ ಬಿಡುಗಡೆ ಮಾಡಲಾಗಿರುವ ಹಣವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ IHSDP ಯೋಜನೆಗೆ ಸಂಬಂಧಿಸಿದಂತೆ ಕಾಲಕಾಲಕ್ಕೆ ಹೊರಡಿಸಲಾಗುವ ಮಾರ್ಗಸೂಚಿಯಂತೆ ಅನುಷ್ಠಾನಗೊಳಿಸತಕ್ಕದ್ದು ಮತ್ತು ಅನುಷ್ಠಾನದ ಹಂತದ ಬಗ್ಗೆ ಕಾಲಕಾಲ್ಕಕೆ ವರದಿಗಳನ್ನು ರಾಜ್ಯ ಸರ್ಕಾರಕ್ಕೆ / ಕೇಂದ್ರ ವಸತಿ ಮತ್ತು ನಗರ ಬಡತನ ನಿರ್ಮೂಲನ ಮಂತ್ರಾಲಯಕೆ ನೀಡತಕ್ಕದ್ದು.

5. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.

6. ಸರ್ಕಾರಕ್ಕೆ ಆಡಿಟ್ ವರದಿಯನ್ನು ನಿಗದಿತ ಸಮಯಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: FD 9 TFP 2004, ದಿನಾಂಕ: 17.08.2004ರಲ್ಲಿ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತ ಮಾಡಲಾಗಿರುವ ಸೂಚನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1618

**ಜಿ.ಆರ್. ನಾಗರಾಜ**
ಪೀಠಾಧಿಕಾರಿ-4,
ವಸತಿ ಇಲಾಖೆ.

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** ಶ್ರೀಮತಿ ಕೋಮಲ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆ ಮೇರೆಗೆ ನಿರ್ದೇಶಕರು, ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರಿಗೆ ರಜೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ವಾಕೈ 108 ಕೈಸೇವಿ 2005, ದಿ: 30.11.2005.
2. ಶ್ರೀಮತಿ ಕೋಮಲ, ಜಂಟಿ ನಿರ್ದೇಶಕರು, ಇವರ ಮನವಿಯ ಪತ್ರ ದಿ: /12.2005, 22.12.2005, 27.1.2006, 9.2.2006, 2.3.2006, 6.4.2006, 8.6.2006.
3. ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಪತ್ರ ಸಂ: ಆಡಳಿತ/ಸಿಬ್ಬಂದಿ/ಇ-4/232/2005-06, ದಿ: 5.4.2006 & 24.4.2006.
4. ಸರ್ಕಾರದ ಅಧಿಸೂಚನೆ ಸಂ: ವಾಕೈ 43 ಕೈಸೇವಿ 2006, ದಿ: 30.5.2006.
5. ಸರ್ಕಾರದ ಪತ್ರ ಸಂಖ್ಯೆ ವಾಕೈ 291 ಕೈಸೇವಿ 2005 ದಿ: 05.12.2006
6. ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಪತ್ರ ಸಂ: ಆಡಳಿತ/ಸಿಬ್ಬಂದಿ/ಇ-4/236/2005-06, ದಿ: 7.7.2007.

ಪ್ರಸ್ತಾವನೆ:

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಅಧಿಸೂಚನೆಯಲ್ಲಿ ಶ್ರೀಮತಿ ಕೋಮಲ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ನೇಮಕಾತಿ ನಿರೀಕ್ಷಣೆಯಲ್ಲಿ ಇವರನ್ನು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಬಿಜಾಪುರ, ಖಾಲಿ ಹುದ್ದೆ ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ಶ್ರೀಮತಿ ಕೋಮಲ, ಜಂಟಿ ನಿರ್ದೇಶಕರು, ಇವರು ದಿ: 1.12.2005 ರಿಂದ 31.5.2006ರವರೆಗೆ ಸರ್ಕಾರಕ್ಕೆ ನೇರವಾಗಿ ಕಾಲಕಾಲಕ್ಕೆ ಮನವಿಗಳನ್ನು ಸಲ್ಲಿಸಿ, ದಿ: 1.12.2005 ರಿಂದ 1.3.2006 ರವರೆಗೆ ವೈದ್ಯಕೀಯ ಕಾರಣಗಳ ಮೇರೆಗೆ ರಜೆಯನ್ನು ಮಂಜೂರು ಮಾಡುವಂತೆ ಸರ್ಕಾರಕ್ಕೆ ವಿನಂತಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಅಯುಕ್ತ ಹಾಗೂ ನಿರ್ದೇಶಕರು, ಶ್ರೀಮತಿ ಕೋಮಲ, ಜಂಟಿ ನಿರ್ದೇಶಕರು, ಇವರಿಗೆ ವೈದ್ಯಕೀಯ ಕಾರಣಗಳ ಮೇರೆಗೆ ರಜೆ ಅವಶ್ಯಕತೆ ಇತ್ತೇಎಂಬ ಬಗ್ಗೆ ವೈದ್ಯಕೀಯ ಮಂಡಳಿಯ ಅಭಿಪ್ರಾಯವನ್ನು ಕೋರಲಾಗಿದೆ ಎಂಬ ಅಂಶವನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಅಧಿಸೂಚನೆಯಲ್ಲಿ ಶ್ರೀಮತಿ ಕೋಮಲ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬಿಜಾಪುರ ಇವರನ್ನು ನಿಯೋಜನೆಯ ಮೇಲೆ ನಿರ್ದೇಶಕರು, ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು ಶ್ರೀ ಎಸ್. ಕುಲಕರ್ಣಿ, ಇವರ ಜಾಗದಲ್ಲಿ ನೇಮಿಸಲು ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವಶಕ್ಕೆ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಸರ್ಕಾರದ ಪತ್ರದಲ್ಲಿ ಸದರಿ ಅಧಿಕಾರಿಯವರಿಗೆ ದಿ: 01.12.2005 ರಿಂದ 31.05.2006ರವರೆಗಿನ ಅವಧಿಗೆ ವೈದ್ಯಕೀಯ ಮಂಡಳಿಯ ವರದಿಯನ್ನು ಪಡೆದು ಸರ್ಕಾರಕ್ಕೆ ಸಲ್ಲಿಸುವಂತೆ ಕೈಗಾರಿಕಾಭಿವೃದ್ಧಿ ಅಯುಕ್ತರಿಗೆ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಇವರು ಶ್ರೀಮತಿ ಕೋಮಲ, ಜಂಟಿ ನಿರ್ದೇಶಕರು, ಇವರಿಗೆ ದಿ: 01.12.2005 ರಿಂದ 3.5.2006 ರವರೆಗೆ ವರ್ಗಾವಣೆ ಅವಧಿಗೆ ವೈದ್ಯಕೀಯ ಕಾರಣಗಳ ಮೇರೆಗೆ ಒಟ್ಟು 182 ದಿನಗಳಿಗೆ ಗಳಿಕೆ/ಪರಿವರ್ತಿತ ರಜೆಯನ್ನು ಮಂಜೂರು ಮಾಡಬೇಕಾಗಿದ್ದು, ಈ ಅವಧಿಗೆ ವೈದ್ಯಕೀಯ ಮಂಡಳಿಯ ಅಭಿಪ್ರಾಯವನ್ನು ಪಡೆಯಲು ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯಕ್ಕೆ ದಿ: 31.2.2007 ರಲ್ಲಿ ಪತ್ರ ಬರೆಯಲಾಗಿತ್ತು. ಅದರನ್ವಯ ಅಧ್ಯಕ್ಷರು, ವೈದ್ಯಕೀಯ ಮಂಡಳಿ, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು, ಇವರು ದಿ: 23.3.2007 ರಂದು ಸಭೆ ಸೇರಿ "The Transfer Leave period from 1.12.2005 to 30.5.2006 (181 days) is not genuine ಎಂಬುದಾಗಿ ವರದಿಯನ್ನು ಕೈಗಾರಿಕಾಭಿವೃದ್ಧಿ ಅಯುಕ್ತರಿಗೆ ತಿಳಿಸಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 291 ಕೈಸೇವಿ2005, ಬೆಂಗಳೂರು ದಿನಾಂಕ: 04.09.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀಮತಿ ಕೋಮಲ, ಜಂಟಿ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆ ಮೇರೆಗೆ ನಿರ್ದೇಶಕರು, ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ವರ್ಗಾವಣೆ ಅವಧಿಯಲ್ಲಿ ದಿ: 1.12.2005 ರಿಂದ 31.5.2006 ರವರೆಗಿನ ಅವಧಿಗೆ ವೈದ್ಯಕೀಯ ಕಾರಣಗಳ ಮೇರೆಗೆ ಒಟ್ಟು 182 ದಿನಗಳಿಗೆ ಗಳಿಕೆ/ಪರಿವರ್ತಿತ ರಜೆ ಮಂಜೂರು ಮಾಡಲು ಕೋರಿರುವ ಪ್ರಯುಕ್ತ ಸದರಿ ಅವಧಿಗೆ ವೈದ್ಯಕೀಯ ಮಂಡಳಿಯ ಅಭಿಪ್ರಾಯ ಪಡೆಯಲು ತೀರ್ಮಾನಿಸಲಾಯಿತು.

ಅಧ್ಯಕ್ಷರು, ವೈದ್ಯಕೀಯ ಮಂಡಳಿ, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಇವರು ದಿ: 23.3.2007 ರಂದು ಸಭೆ ಸೇರಿ "The Transfer Leave period from 1.12.2005 to 30.5.2006 (181 days) is not genuine" ಎಂಬ ಅಭಿಪ್ರಾಯದೊಂದಿಗೆ ವರದಿಯನ್ನು ನೀಡಿರುತ್ತಾರೆ. ಸದರಿ ವರದಿಯನ್ನು ಸರ್ಕಾರದಲ್ಲಿ ಪರಿಗಣಿಸಿದೆ.

ವೈದ್ಯಕೀಯ ಮಂಡಳಿಯ ವರದಿಯ ಮೇರೆಗೆ ಶ್ರೀಮತಿ ಕೋಮಲ, ಜಂಟಿ ನಿರ್ದೇಶಕರು, ಇವರಿಗೆ ದಿ: 1.12.2005 ರಿಂದ 30.5.2006 ರವರೆಗೆ ಒಟ್ಟು 181 ದಿನಗಳವರೆಗಿನ ಅವಧಿಗೆ "ವೇತನ ರಹಿತ ರಜೆ" (LWA) ಎಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ಬೆಂಗಳೂರು, ದಿ: 10.07.1990ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1644

**ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**ವಸತಿ ಸಚಿವಾಲಯ**

**ವಿಷಯ:** ತುಮಕೂರು ಜಿಲ್ಲೆಯ ತುರುವೇಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** 1 ಸರ್ಕಾರದ ಆದೇಶ ಸಂ. ವಇ/42/ಹೆಚ್ಎಎಂ/1998. ದಿನಾಂಕ: 10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ತುಮಕೂರು ಜಿಲ್ಲೆಯ ತುರುವೇಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ/47/ಹೆಚ್ಎಎಸ್/2007, ಬೆಂಗಳೂರು, ದಿನಾಂಕ 03–09–2007**

ಮೇಲ್ಕಂಡ ಸಂದರ್ಭದಲ್ಲಿ ತುಮಕೂರು ಜಿಲ್ಲೆಯ ತುರುವೇಕೆರೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು, ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಶ್ರೀನಿವಾಸ ಬಿನ್ ವೆಂಕಟಪ್ಪ, ವಿನೋಭನಗರ, ತುರುವೇಕೆರೆ | ಸದಸ್ಯರು |
| 2. | ಶ್ರೀಮತಿ ವಿಜಯಲಕ್ಷ್ಮಿ ಕೋಂ. ಟಿ.ಆರ್. ಮಂಜುನಾಥ್, ಹೊರಪೇಟೆ, ತುರುವೇಕೆರೆ | ಸದಸ್ಯರು |
| 3. | ಶ್ರೀ ಜಪ್ರಲ್ ಖಾನ್ ಬಿನ್ ಬುಡೇನಾ ಖಾನ್, ಬಾವಿಕೆರೆ, ತುರುವೇಕೆರೆ | ಸದಸ್ಯರು |
| 4. | ಶ್ರೀ ಸಿಡಿಯಾರ ರಾಜಣ್ಣ ಬಿನ್ ಗಂಗಣ್ಣ, ಬಾವಿಕೆರೆ, ತುರುವೇಕೆರೆ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1645

**ರಂಗಮ್ಮ**
ಪೀಠಾಧಿಕಾರಿ–2,
ವಸತಿ ಇಲಾಖೆ

**INFRASTRUCTURE DEVELOPMENT SECRETARIAT**

**Sub:** Sharing of cost in Bidar-Gulbarga Railway Project.

**Preamble:**

Bidar-Gulbarga new broad guage railway line has been sanctioned by the Ministry of Railways, Govt. of India and is under implementation since 2003-04. The length of the line is 107 KMs with a total cost of about Rs. 386.60 crore. The progress of this project is very slow because of meagre funds released by the Railways.

2. This project would accelerate the industrial and economic development of North-East Karnataka region and provide much needed rail connectivity to the farmers, industrialists, traders and tourists. The project is also necessary to reduce the regional imbalance, as one third of the most backward Taluks as per the Nanjundappa report are situated in Bidar and Gulbarga districts. Considering the importance of this project, the State Government offered to share a part of the cost of this project.

3. A provision of Rs. 20.00 crore has been made in 2007-08 Budget. The State Government has been repeatedly requesting the Ministry of Railways to take up this railway line as a cost sharig project to be commissioned within 2-3 years. The Ministry of Railways has estimated the cost of the project at for Rs. 386.60 crore and has agreed to take up his new line on 50:50 cost sharing basis between GOK and MOR respectively.

4. Considering the urgency and socio-economic importance of this project in reducing the regional imbalance, the State Government has decided to share 50% of the cost which may work out to about Rs. 193.30 crore (State share). Accordingly this order.

**Government Order No. IDD 12 NSW 2004, Bangalore, dated 05.09.2007**

In the circumstances explained in the premable sanction of the State Government is hereby accorded for the following:-

i) To take up the Bidar-Gulbarga Railway project on 50:50 cost sharing basis between Ministry of Railways and Government of Karnataka.

ii) Sharing of 50% of the cost (about 193.00 crore) of this project.
iii) To complete this project within a period of three years.

By order and in the Name of the Governor of Karnataka
**N. Manjula Geetha**
Under Secretary to Government,
Infrastructure Development Department.

PR. 1646

**Sub:** Release of funds towards New cost Sharing Railway Projects-Kottur-Harihar New Broad Gauge Railway Line Project – reg.

**Read:**
1. G.O. No. IDD 1 NSW 2002 dated 22.03.2002.
2. G.O. No. IDD 47 NSW 2003 (P) dated 26.03.2004.
3. G.O. No. IDD 51 NSW 2004 dated 19.07.2004.
4. G.O. No. IDD 98 NSW 2004 dated 21.10.2006
5. G.O. No. IDD 98 NSW 2003 dated 20.12.2006
6. Letter No. W.63/CN/BNC/Genl/2007-08 dated 2.07.2007 of CAO, SWR.

**Preamble:**

In G.O. dated 22.03.2002 referred to at (1) above, State Government has accorded administrative approval for bearing 2/3rd of the estimated total cost of the project. Government of Karnatka has so far released Rs. 40 crores towards Kottur-Harhara New Railway Project vide G.O's read at Sl Nos. (2) to (5) above.

2. In the letter read at Sl. No. (6) above the Chief Adminsitrative Officer, SWR has intimated that the revised cost of the project is Rs. 281.20 crore and that the 2/3rd share of the GoK is Rs. 187.46 crore and the amount deposited so far by GoK is Rs. 40.00 crore and the balance amount of Rs. 147.46 crore is to be deposited with the Railways.

3. The proposal of Railways has been examined and it has been decided to release an amount of Rs. 30.00 crore out of the budget of Rs. 100.00 crore provided under the Head of Account ``5465-01-190-3-05 Plan 211 investments towards Cost sharing for new railway projects during 2007-08. Hence this order.

**Government Order No. IDD 98 NSW 2003, Bangalore, dated: 05-09-2007**

After careful examination of the request of Railways Government is pleased to release Rs. 30.00 crore (Rupees Thirty crore) only towards Kottur-Harihar new Railway line being the part of the balance 2/3rd share of Government of Karnataka. The above amount may be met under Head of Account ``**5465-01-190-3-05 plan 211 investment"** out of the budget provision of Rs. 100 crore towards New Cost Sharing Projects.

2. The CFO and Company Secretary, iDeCK, is authorized to draw the amount on Payee's Receipt duly countersigned by the Under Secretary to Government, Infrastructure Development Department and iDeCk shall draw in-turn and deposit the same with the Financial Advisor & Chief Accounts Officer (Cons.), South Western Railway, Bangalore.

3. This order issues with the concurrence of the Finance Department vide its U.O. Note No.FD 1370/Exp-I/07 dated 30.08.2007.

By order and in the Name of the Governor of Karnataka
**N. Manjula Geetha**
Under Secretary to Government,
Infrastructure Development Department.

PR. 1647

ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕೊಡಗು ಜಿಲ್ಲೆ ನಾಲ್ಕುನಾಡು ಅರಮನೆಯ ನಿರ್ವಹಣೆಗಾಗಿ ಸ್ಥಳೀಯ ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ

**ಓದಲಾಗಿದೆ:** 1 ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಅವರ ಅಧ್ಯಕ್ಷತೆಯಲ್ಲಿ ದಿನಾಂಕ 26–04–2006ರಂದು ನಡೆದ ಸಭೆಯ ನಡವಳಿಯ ನಿರ್ಣಯ

2 ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರ ಪತ್ರ ಸಂಖ್ಯೆ: ಡಿಎಎಂ:ಎಸಿಟಿ:6:136:2006–07 ದಿನಾಂಕ 22–1–2007

**ಪ್ರಸ್ತಾವನೆ:**

ಕೊಡಗು ಜಿಲ್ಲೆ ನಾಲ್ಕುನಾಡು ಅರಮನೆಯ ಸಮರ್ಪಕ ನಿರ್ವಹಣೆಗಾಗಿ ಒಂದು ಸ್ಥಳೀಯ ಸಲಹಾ ಸಮಿತಿಯನ್ನು ರಚಿಸಬೇಕೆಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಅವರ ಅಧ್ಯಕ್ಷತೆಯಲ್ಲಿ ದಿನಾಂಕ 26–4–2006ರಂದು ನಡೆದ ಸಭೆಯಲ್ಲಿ ಅಭಿಪ್ರಾಯಪಡಲಾಯಿತು. ಅದರಂತೆ ಪರಿಶೀಲಿಸಿದ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 22–1–2007ರ ಪತ್ರದಲ್ಲಿ ನಾಲ್ಕುನಾಡು ಅರಮನೆಯ ರಾಜ್ಯ ಸಂರಕ್ಷಿತ ಸ್ಮಾರಕವಾಗಿದ್ದು ಇದನ್ನು ಸದುಪಯೋಗಪಡಿಸಿಕೊಳ್ಳುವ ಹಾಗೂ ಸಮರ್ಪಕವಾಗಿ ನಿರ್ವಹಿಸುವ ಸಲುವಾಗಿ ಒಂದು ಸ್ಥಳೀಯ ಸಲಹಾ ಸಮಿತಿಯನ್ನು ರಚಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 208 ಕೆಎಂಯು 2007 ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2007**

ಕೊಡಗು ಜಿಲ್ಲೆ, ಮಡಿಕೇರಿ ಸಮೀಪ ಇರುವ ನಾಲ್ಕುನಾಡು ಅರಮನೆಯ ಸದುಪಯೋಗ ಹಾಗೂ ಸಮರ್ಪಕ ನಿರ್ವಹಣೆಗಾಗಿ ಸೂಕ್ತ ಸಲಹೆ ಸೂಚನೆಗಳನ್ನು ನೀಡಲು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಸಮಿತಿಯನ್ನು ಸರ್ಕಾರವು ಈ ಮೂಲಕ ರಚಿಸುತ್ತದೆ.

| | | |
|---|---|---|
| 1. | ಉಪವಿಭಾಗಾಧಿಕಾರಿಗಳು, ಮಡಿಕೇರಿ | ಅಧ್ಯಕ್ಷರು |
| 2. | ಕೂರ್ಗ್ ಫೌಂಡೇಶನ್ ಪ್ರತಿನಿಧಿ | ಸದಸ್ಯರು |
| 3. | ಇಂಟ್ಯಾಕ್, ಕರ್ನಾಟಕ ಪ್ರತಿನಿಧಿ | ಸದಸ್ಯರು |
| 4. | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಮಡಿಕೇರಿ | ಸದಸ್ಯರು |
| 5. | ಸ್ಥಳೀಯ ಗ್ರಾಮ ಅರಣ್ಯ ಸಮಿತಿ ಕಕ್ಕಬ್ಬೆ ಪ್ರತಿನಿಧಿ | ಸದಸ್ಯರು |
| 6. | ಏರ್ ಮಾರ್ಷಲ್ ಕೆ.ಸಿ. ಕಾರಿಯಪ್ಪ (ನಿವೃತ್ತ) | ಸದಸ್ಯರು |
| 7. | ಶ್ರೀಮತಿ ಅನುಪಾ ಮಂಡಣ್ಣ, ವಾಸ್ತುಶಿಲ್ಪಿ | ಸದಸ್ಯರು |
| 8. | ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮಡಿಕೇರಿ | ಸದಸ್ಯರು |
| 9. | ಕ್ಯುರೇಟರ್, ಸರ್ಕಾರಿ ವಸ್ತು ಸಂಗ್ರಹಾಲಯ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮಡಿಕೇರಿ | ಸದಸ್ಯ ಕಾರ್ಯದರ್ಶಿ |

ಮೇಲ್ಕಂಡ ಸಮಿತಿಯು ಕಾಲಕಾಲಕ್ಕೆ ಸಭೆ ಸೇರಿ ನಾಲ್ಕುನಾಡು ಅರಮನೆಯನ್ನು ಸದುಪಯೋಗಪಡಿಸಿಕೊಳ್ಳುವುದು, ಸಮರ್ಪಕವಾಗಿ ನಿರ್ವಹಿಸುವುದು ಹಾಗೂ ಅದನ್ನು ಸಾಂಸ್ಕೃತಿಕ ಕೇಂದ್ರವನ್ನಾಗಿ ಮಾಡುವ ಕುರಿತು ಸಲಹೆ ನೀಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1649

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ತೋಟಗಾರಿಕೆ ಸಚಿವಾಲಯ**

**ವಿಷಯ:** 2007–08ನೇ ಸಾಲಿನಲ್ಲಿ "ದ್ರಾಕ್ಷಾರಸ ನೀತಿ" – ಹೊಸ ಯೋಜನೆ ಲೆಕ್ಕಶೀರ್ಷಿಕೆ 2401–00–800–2–36 ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 513 ತೋಇವಿ 2005 ದಿ: 14.3.2007.

2 ನೊಂದಣಿ ಪತ್ರ ಸಂಖ್ಯೆ: BLU-S1453-2006-07 ದಿ: 28–3–2007.

3. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ/ಯೋ/ಸತೋಅ–1/4/2007–08 ದಿ: 10.4.2007.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದ ರೈತರ ಹಿತದೃಷ್ಟಿಯಿಂದ ದ್ರಾಕ್ಷಾರಸ ಉತ್ಪಾದನಾ ಮತ್ತು ಮಾರುಕಟ್ಟೆಯನ್ನು ಅಭಿವೃದ್ಧಿಪಡಿಸುವ ದಿಶೆಯಲ್ಲಿ ಸೂಕ್ತ ಪ್ರೋತ್ಸಾಹ ನೀಡಲು ಸರ್ಕಾರವು ಮೇಲೆ ಓದಲಾದ (1)ರ ಸರ್ಕಾರಿ ಆದೇಶದನ್ವಯ "ಕರ್ನಾಟಕ ದ್ರಾಕ್ಷಿ ಸಂಸ್ಕರಣೆ ಮತ್ತು ದ್ರಾಕ್ಷಾರಸ (ವೈನ್) ನೀತಿ 2007" ಅನ್ನು ಜಾರಿಗೆ ತಂದಿರುತ್ತದೆ. ಇದರ ಹಿನ್ನೆಲೆಯಲ್ಲಿ ಮೇಲೆ ಓದಲಾದ (2)ರ ಪತ್ರದನ್ವಯ ಕರ್ನಾಟಕ ದ್ರಾಕ್ಷಾರಸ ಬೋರ್ಡ್‌ನ್ನು ನೊಂದಾಯಿಸಲಾಗಿದೆ.

2. 2007–08ನೇ ಸಾಲಿನ ಆಯವ್ಯಯದಲ್ಲಿ "ದ್ರಾಕ್ಷಾರಸ ನೀತಿ" ಎಂಬ ಹೊಸ ಯೋಜನೆಯನ್ನು ಘೋಷಿಸಲಾಗಿದ್ದು ಲೆಕ್ಕಶೀರ್ಷಿಕೆ 2401–00–800–02–36ರಡಿ ರೂ. 400.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ.

3. ತೋಟಗಾರಿಕೆ ನಿರ್ದೇಶಕರು ಮೇಲೆ ಓದಲಾದ (3)ರ ಪತ್ರದನ್ವಯ "ದ್ರಾಕ್ಷಾರಸ ನೀತಿ" ಎಂಬ ಹೊಸ ಯೋಜನೆಯನ್ನು 2007–08ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ಅನ್ವಯ ಕರ್ನಾಟಕ ದ್ರಾಕ್ಷಿ ವೈನ್ ಬೋರ್ಡ್‌ಗೆ ತೋಟಗಾರಿಕೆ ಇಲಾಖೆಯಿಂದ ರೂ. 10.00 ಕೋಟಿ, ಕೆಪೆಕ್‌ಯಿಂದ ರೂ. 8.00 ಕೋಟಿ ಮತ್ತು ಕರ್ನಾಟಕ ರಾಜ್ಯ ಪಾನೀಯ ನಿಗಮದಿಂದ ರೂ. 7.00 ಕೋಟಿಗಳು, ಒಟ್ಟು ರೂ. 25.00 ಕೋಟಿಗಳ ಷೇರುಧನ ತೊಡಗಿಸಬೇಕಾಗಿದೆ.

ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 78 ತೊಯೋಕಾ 2007, ಬೆಂಗಳೂರು, ದಿನಾಂಕ: 10.09.2007**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಗಳ ಹಿನ್ನೆಲೆಯಲ್ಲಿ 2007–08ನೇ ಸಾಲಿನಲ್ಲಿ "ದ್ರಾಕ್ಷಾರಸ ನೀತಿ" ಎಂಬ ಹೊಸ ಯೋಜನೆಯನ್ನು ಜಾರಿಗೊಳಿಸಲು ಲೆಕ್ಕಶೀರ್ಷಿಕೆ 2401–00–800–2–36 (ಯೋಜನೆ) ಅಡಿ ರೂ. 133.00 ಲಕ್ಷಗಳನ್ನು (ರೂಪಾಯಿ ಒಂದು ನೂರ ಮೂವತ್ತ್ಮೂರು ಲಕ್ಷಗಳು ಮಾತ್ರ) ಕರ್ನಾಟಕ ಗ್ರೇಪ್ ವೈನ್ ಬೋರ್ಡ್‌ಗೆ ಷೇರುಧನವನ್ನಾಗಿ ಬಿಡುಗಡೆ ಮಾಡಲು ಸರ್ಕಾರವು ಅನುಮತಿಯನ್ನು ನೀಡಿದೆ.

ಈ ಸಂಬಂಧವಾಗಿ ವೈನ್ ಬೋರ್ಡ್‌ಗೆ ಕೆಪೆಕ್ ಮತ್ತು ಕರ್ನಾಟಕ ಬ್ರೆವೇರೀಸ್ ಕಾರ್ಪೋರೇಷನ್ ಇವರಿಂದ ಷೇರುಧನ ಪಡೆಯುವ ಕುರಿತು ಆಗಿರುವ ಕ್ರಮದ ವಿವರಗಳನ್ನು ಒದಗಿಸಲು ತೋಟಗಾರಿಕೆ ನಿರ್ದೇಶಕರಿಗೆ ತಿಳಿಸಲಾಗಿದೆ.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 37 ಪಿಎಫ್‌ಓ 2007 ದಿ: 31.5.2007 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 248 ವೆಚ್ಚ 4/07 ದಿ: 23.8.2007ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1650

**ಎಸ್. ರಾಜು,**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ

**ಸಾರಿಗೆ ಸಚಿವಾಲಯ**

**ವಿಷಯ:** ಮೈಸೂರು ನಗರದಲ್ಲಿ ಮತ್ತೊಂದು ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಪ್ರಾರಂಭಿಸುವ ಬಗ್ಗೆ

**ಓದಲಾಗಿದೆ:**
1 ಸಾರಿಗೆ ಆಯುಕ್ತರ ಪತ್ರ ಸಂಖ್ಯೆ: ಸಾಆ/ಸಿಬ್ಬಂದಿ–1/ಪಿಆರ್ 139/2005–06, ದಿನಾಂಕ 15–11–2005.
2 ಸಾರಿಗೆ ಆಯುಕ್ತರ ಪತ್ರ ಸಂಖ್ಯೆ: ಸಾಆ/ಸಿಬ್ಬಂದಿ–1/ಪಿಆರ್–220/2005–06, ದಿನಾಂಕ 22–12–2005.

**ಪ್ರಸ್ತಾವನೆ:**

ಸಾರಿಗೆ ಆಯುಕ್ತರು ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ಮೈಸೂರು ಪ್ರಾದೇಶಿಕ ಸಾರಿಗೆ ಕಛೇರಿಯ ವ್ಯಾಪ್ತಿಯು ಪ್ರಸ್ತುತ ಪತ್ತದಲ್ಲಿ ಮೈಸೂರು, ನಂಜನಗೂಡು ಮತ್ತು ಟಿ. ನರಸೀಪುರ ತಾಲ್ಲೂಕುಗಳನ್ನು ಒಳಗೊಂಡಿದ್ದು, ಬೆಳೆಯುತ್ತಿರುವ ಮೈಸೂರು ನಗರ ಹಾಗೂ ಅಧಿಕ ಜನಸಂಖ್ಯೆಗನುಗುಣವಾಗಿ ಸಾರಿಗೆ ವಲಯ ತ್ವರಿತ ಅಭಿವೃದ್ಧಿ ಹೊಂದುತ್ತಿರುವುದರಿಂದ ವಾಹನಗಳ ನೊಂದಣಿ ಸಂಖ್ಯೆ ಹೆಚ್ಚಾಗುತ್ತಿದೆ. ದಿನಾಂಕ 31–3–2005ರ ಅಂತ್ಯಕ್ಕೆ ಕಛೇರಿಯಲ್ಲಿ 3,03,475 ವಾಹನಗಳು ನೊಂದಾಯಿಸಿದ್ದು, ಇವುಗಳಲ್ಲಿ 26,907 ಸಾರಿಗೆ ಮತ್ತು 2,76,568 ಸಾರಿಗೇತರ ವಾಹನಗಳಾಗಿರುತ್ತವೆ, ಅದೇ ರೀತಿ ಚಾಲನ ಪರವಾನಿಗೆ ನೀಡಿಕೆ ಸಾರಿಗೆ ಪ್ರಾಧಿಕಾರದ ಕೆಲಸ, ಪ್ರವರ್ತನ, ತೆರಿಗೆ ಬಾಕಿ ಪ್ರಕರಣಗಳು ಇತ್ಯಾದಿ ಕೆಲಸಗಳ ಒತ್ತಡ ಜಾಸ್ತಿಯಾಗುತ್ತಿದೆ. ಆದ್ದರಿಂದ ಸಮರ್ಪಕ ನಿರ್ವಹಣೆ ಹಾಗೂ ಆಡಳಿತದ ಹಿತದೃಷ್ಟಿಯಿಂದ ಮೈಸೂರು ನಗರದಲ್ಲಿ ಮತ್ತೊಂದು ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಪ್ರಾರಂಭಿಸಲು ಸರ್ಕಾರದ ಮಂಜೂರಾತಿ ಕೋರಿದ್ದರು. ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ಸಾರಿಗೆ ಆಯುಕ್ತರು ಕೆಲವು ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಗಳನ್ನು, ಪ್ರಾದೇಶಿಕ ಸಾರಿಗೆ ಕಛೇರಿಗಳ ಮಟ್ಟಕ್ಕೆ ಉನ್ನತೀಕರಿಸಿರುವುದರಿಂದ ವಿಭಾಗದ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಉಪ ಸಾರಿಗೆ ಆಯುಕ್ತರುಗಳಿಗೆ ಕಾರ್ಯದ ಒತ್ತಡ ಹೆಚ್ಚಾಗುವುದರಿಂದ ಆಡಳಿತಾತ್ಮಕ ಹಿತದೃಷ್ಟಿಯಿಂದ ಎರಡು ಉಪ ಸಾರಿಗೆ ಆಯುಕ್ತರ ಹುದ್ದೆಗಳನ್ನು ಸೃಜಿಸಲು ಪ್ರಸ್ತಾಪಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಉಪ ಸಾರಿಗೆ ಆಯುಕ್ತರ ಹುದ್ದೆಗಳನ್ನು ಸೃಜಿಸುವುದನ್ನು ಮುಂದೂಡಲು ಮತ್ತು ಮೈಸೂರಿನಲ್ಲಿರುವ ಪ್ರಾದೇಶಿಕ ಸಾರಿಗೆ ಕಛೇರಿಯ ಕಾರ್ಯವತ್ತಡವು ಹೆಚ್ಚಿರುವುದರಿಂದ ಮೈಸೂರಿನಲ್ಲಿ ಮತ್ತೊಂದು ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಪ್ರಾರಂಭಿಸಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಾರಿಇ 335 ಸಾಇಸೇ 2005, ಬೆಂಗಳೂರು, ದಿನಾಂಕ: 30.08.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ನಗರದಲ್ಲಿ ಮತ್ತೊಂದು ಪ್ರಾದೇಶಿಕ ಸಾರಿಗೆ ಕಛೇರಿಯನ್ನು (ಮೈಸೂರು ಪೂರ್ವ ಎಂದು) ಪ್ರಾರಂಭಿಸಲು ಮಂಜೂರಾತಿ ನೀಡಿ, ಒಂದು **ಪ್ರಾದೇಶಿಕ ಸಾರಿಗೆ ಅಧಿಕಾರಿಯ ಹುದ್ದೆಯನ್ನು ವೇತನ ಶ್ರೇಣಿ 14050–25050 ರಲ್ಲಿ ಸೃಜಿಸಲಾಗಿದೆ.**

ಹಾಲಿ ಇರುವ ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಮೈಸೂರು ಪಶ್ಚಿಮ ಎಂದು ಮತ್ತು ಹೊಸದಾಗಿ ಪ್ರಾರಂಭಿಸುವ ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಮೈಸೂರು ಪೂರ್ವ ಎಂದು ಹೆಸರಿಸಿ ಈ ಕೆಳಕಂಡಂತೆ ವ್ಯಾಪ್ತಿಯನ್ನು ನಿಗದಿಪಡಿಸಲಾಗಿದೆ.

ಅ) **ಮೈಸೂರು ಪಶ್ಚಿಮ:** ನಂಜನಗೂಡು ತಾಲ್ಲೂಕು ಮತ್ತು ಪೂರ್ವ ವ್ಯಾಪ್ತಿಯಲ್ಲಿ ಬರುವ ಅಂದರೆ ಬೆಂಗಳೂರು–ಮೈಸೂರು ರಸ್ತೆ ವಯಾ ಬನ್ನಿಮಂಟಪ, ಸಯ್ಯಾಜಿರಾವ್ ರಸ್ತೆ, ಚಾಮುಂಡಿಪುರಂ ವೃತ್ತ, ವಿದ್ಯಾರಣ್ಯಪುರಂ–ನಂಜನಗೂಡು ಲಿಂಕ್ ರೋಡ್ ಈ ವ್ಯಾಪ್ತಿಯಿಂದ ಪಶ್ಚಿಮಕ್ಕೆ ಬರುವ ಪ್ರದೇಶ.

ಆ) **ಮೈಸೂರು ಪೂರ್ವ:** ಈ ಕಛೇರಿಯನ್ನು ನಜರಾಬಾದ್‌ನಲ್ಲಿ ತೆರೆಯುವುದು ಇದಕ್ಕೆ ಟಿ. ನರಸೀಪುರ ತಾಲ್ಲೂಕು ಸೇರಿಕೊಳ್ಳುತ್ತದೆ, ಮತ್ತು ಬೆಂಗಳೂರು–ಮೈಸೂರು ರಸ್ತೆ, ವಯಾ: ಬನ್ನಿ ಮಂಟಪ, ಸಯ್ಯಾಜಿರಾವ್ ರಸ್ತೆ, ಚಾಮುಂಡಿಪುರಂ ವತ್ತ, ವಿದ್ಯಾರಣ್ಯಪುರಂ–ನಂಜನಗೂಡು ಲಿಂಕ್ ರೋಡ್, ಈ ವ್ಯಾಪ್ತಿಯಿಂದ ಪೂರ್ವಕ್ಕೆ ಬರುವ ಪ್ರದೇಶ.

ಪಶ್ಚಿಮ ಕಛೇರಿಯಲ್ಲಿ ಮಂಜೂರಾಗಿರುವ ಹುದ್ದೆಗಳಲ್ಲಿ ಈ ಕೆಳಕಂಡ ಹುದ್ದೆಗಳನ್ನು ಪೂರ್ವ ಕಛೇರಿಗೆ ಈ ಕೂಡಲೇ ಜಾರಿಗೆ ಬರುವಂತೆ ಸ್ಥಳಾಂತರಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಗಳ ಪದನಾಮ | ಒಟ್ಟು ಮಂಜೂರಾದ ಹುದ್ದೆಗಳು | ಮೈಸೂರು ಪಶ್ಚಿಮ ಪ್ರಾದೇಶಿಕ ಸಾರಿಗೆ ಕಛೇರಿಗೆ ಹಂಚಿಕೆ ಮಾಡಿದ ಹುದ್ದೆಗಳು | ಮೈಸೂರು ಪೂರ್ವ ಕಛೇರಿಗೆ ಹಂಚಿಕೆ ಮಾಡಿದ ಹುದ್ದೆಗಳು |
|---|---|---|---|---|
| 1. | ಪ್ರಾದೇಶಿಕ ಸಾರಿಗೆ ಅಧಿಕಾರಿ | 1 | 1 | 1 (ಹೊಸದಾಗಿ ಸೃಜಿಸಲಾದ ಹುದ್ದೆ) |
| 2. | ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ | 3 | 2 | 1 |
| 3. | ಖಜಾನೆ : ತೆರಿಗೆ ಅಧಿಕಾರಿ | 1 | 1 | 0 |
| 4. | ಹಿರಿಯ ಮೋಟಾರು ವಾಹನ ನಿರೀಕ್ಷಕರು | 5 | 3 | 2 |
| 5. | ಮೋಟಾರು ವಾಹನ ನಿರೀಕ್ಷಕರು | 14 | 7 | 7 |
| 6. | ಲೆಕ್ಕಾಧೀಕ್ಷಕರು | 1 | 1 | 0 |
| 7. | ಅಧೀಕ್ಷಕರು | 3 | 2 | 1 |
| 8. | ಶೀಘ್ರಲಿಪಿಗಾರರು | 1 | 1 | 0 |
| 9. | ಪ್ರಥಮ ದರ್ಜೆ ಸಹಾಯಕರು | 12 | 6 | 6 |
| 10. | ದ್ವಿತೀಯ ದರ್ಜೆ ಸಹಾಯಕರು | 13 | 7 | 6 |
| 11. | ಬೆರಳಚ್ಚುಗಾರರು | 2 | 1 | 1 |
| 12. | ವಾಹನ ಚಾಲಕರು | 2 | 1 | 1 |
| 13. | ಅಟೆಂಡರ್ | 1 | 1 | 0 |
| 14. | ಟ್ರಜರಿ ಗಾರ್ಡ್ | 2 | 1 | 1 |
| 15. | ಗ್ರೂಪ್–ಡಿ | 9 | 5 | 4 |

ಸಾರಿಗೆ ಇಲಾಖೆಯಲ್ಲಿ ಇರುವ ಒಟ್ಟು ಸಹಾಯಕ ಪ್ರಾದೇಶಿಕ ಅಧಿಕಾರಿಗಳ ಹುದ್ದೆಗಳಲ್ಲಿ ಒಂದು ಹುದ್ದೆಯನ್ನು ರದ್ದುಪಡಿಸಲಾಗಿದೆ. (ಸದರಿ ಹುದ್ದೆಯನ್ನು ಸಾರಿಗೆ ಆಯುಕ್ತರು ಗುರುತಿಸುವುದು)

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 47 ವೆಚ್ಚ 6/2006, ದಿನಾಂಕ 21.2.2006ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1651

**ಕೆ.ಎಸ್. ಶ್ರೀಧರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ

**COMMERCE & INDUSTRIES SECRETARIAT**

**Sub :** Project proposal of M/s Enercon (India) Ltd., to establish "205.6 MW wind Power Project in Gadag District.

**Read :** Proceedings of the 8th State High Level Clearance Committe (SHLCC) meeting held on 23-2-2007.

**Preamble:**

M/s Enercon (India) Ltd., proposed to etablish "205.6 MW wind Power Project Comprising 257 WECs at 8 different Wind Famable Sites, in Gadag District, with an investment of Rs. 1028.00 crores on 750 acres of land in Mulasamudra, Kurtakoti, Hulkoti, Harti, Nagavi Kannavi, Hosur and Malagunda of Gadag Taluk and District. The project would provide enmployment to about 520 persons. The Company had requested approval of the project for sanction of various Infrastructure facilities as well as incentives and concessions.

The State High Level Clearance Committee, (SHLCC) after detailed discussion of the project proposal of the said Company, approved the project proposal of M/s Enercon (India) LTD., and recommended to grant Infrastructure facilities and to extend incentives & concessions. Hence the following order.

**Government Order No. CI 159 SPI 2007, Bangalore, Dated 13th June 2007**

In the circumstances explained above, Government is pleased to approve project M/s Enercon (India) LTD., to establish "205.6 MW wind Power Project Comprising 257 WECs at 8 different Wind Farmable Sites, in Gadag District, with an investment of Rs. 1028.00 crores on 750 acres of land in Mulasamudra. Kurtakoti, Hulkoti, Harti, Nagavi Kannavi, Hosur and Malagunda of Gadag Taluk and District, and extend the following infrastructute facilities, incentives and concessions.

**INFRASTRUCTURE FACILITIES :**

**Land :** KIADB to acquire & allot 750 acres of land on consent award basis at various Sy.No.s of Mulasamudra, Kurtakoti, Hulkoti, Harti, Nagavi Kannavi, Hosur and Mulagunda of Gadag Taluk and District.

**Water :** 5000 lpd to be met out of own bore well.

**Incentives and Concessions :** As per New Industrial Policy 2006.

**Environment :** The promoters were advised to obtain CFE from KSPCB.

**Employment :** The Company shail perpare a plan for development not human resource required for the project, train local people and provide employment to these trained local youth and comply with Government policy providing Employment to local people. A copy of human resource development plan shall be sent to the Commissioner for I.D. & Director of Industries and Commerce for monitoring.

**Vendor Development :** Where ever there is scope for vendor development – for the project, the Company shall prepare a vendor development plan., develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development :** The Company is advised to take up social infrastructure development projects in the vicinity of proposed location of the unit. A copy of such projects shall be sent to the Commissioner for I.D. & Director of Industrial and Commerce for monitoring.

**Others :**

The promoter shall take all statutory and other necessary clearances and shall submit milestones/ progress in implementation of the project regularly, which will be monitored by the Departments concerned.

This approval is valid for a period of two years from the date of issue.

By order and in the name of the Governor of Karnataka,

PR. 1820

**K.R. CHANDRAMMA**

Desk Officer (Technical Cell)

Commerce & Industries Department.

## ENERGY SECRETARIAT

**Sub:** Allotment of New Thermal Power Plants to Karnataka Power Corporation Limited.

**Read:** 1) G. O.No. EN 76 PPC 2006 dated 13.07.2007.

2) MD. KPCL letter No.A1L1TPS/156 dated 27.07.2007.

**Preamble**:

Government of Karnataka vide its G.O. read (1) above had allotted the following Thermal Power Projects(TPP) to Karnataka Power Corporation Limited (KPCL) and directed to take necessary steps to prepare Detailed Project Reports and also to obtain necessary Statutory Clearances from the respective authorities:

(i) Kudgi TPP ( 2 x 500 MW) : Bijapur District
(ii) Kowshika TPP (2 x 500 MW) : Hassan District
(iii) Raichur Thermal Power Station-II (RTPS)(1 x 500 MW) : Raichur District
(iv) Nandur TPP ( 1 x 500 MW) : Gulbarga District

Managing Director, KPCL vide letter read (2) above has informed that after a detailed analysis of site location and scope of project, the above project sites has been modified and fresh projects have been located as follows:

| Sl. No. | As per G.O. Read at 1 above | | Location | Name of the proposed Thermal Power Project | Now proposed Capacity |
|---|---|---|---|---|---|
| | Location | Units | | | |
| 1 | 2 | 3 | 4 | 5 | 6 |
| | **MODIFIED PROJECTS** | | | | |
| 1 | RTPS-II | 1x500 | KIADB's land near Vadlur and Chiksugur | Yermaras Thermal Power Project | 2x500MW |
| 2 | Nandur TPP | 1x500 | Yadgir | Yadgir Thermal Power Project | 2x500MW |
| 3 | Kowshika | 2x500 | Annechakanahalli | Annechakanahalli Thermal Power Project | 3x500MW |
| 4 | Kudgi | 2x500 | Kalgurki | Kalgurki Thermal Power Project | 3x500MW |
| | **NEW PROJECTS** | | | | |
| 1 | RTPS-II | | Mill reject area Shaktinagar | Edlapur Thermal Power Project | 1x500MW |
| 2 | | | i) BTPS Unit-3 Expansion project: Within the existing premises of Bellary Thermal Power Project.<br>ii) BTPS stage-II: Kudatini | BTPS Unit-3<br>Kudatini Thermal Power Project. | 1x500MW<br>3x500MW |

KPCL is taking steps to put up new Thermal Power Plants and expansion units in the existing power plants to bridge the gap between demand and supply of power in the 11$^{th}$ Fiver Year Plan and thereafter.

Further Managing Director, KPCL in the above letter has informed that No Land issues involved in respect of setting up of Thermal Power Plants at

(i) Edlapur Thermal Power Project in the existing premises of RTPS.
(ii) Yermaras Thermal Power Project on KIADB's land near RTPS.
(iii) Bellary Thermal Power Station(BTPS) Unit-3 in the existing premises.

The Technical Committee of KPCL in its 192nd Meeting held on 13.07.2007 has recommended to seek approval of Government of Karnataka for allotment of the above projects.

Managing Director, KPCL has requested approval of Government of Karnataka to allot the projects and capacities indicated at column (5) and (6) of the statement above and to seek Statutory Clearances for taking up implementation of the projects.

The Proposal has been examined at the Government level and hence this order:

**GOVERNMENT ORDER No. EN 76 PPC 2006, Bangalore Dated 3rd September 2007**

Government hereby allot the following Thermal Power Projects to Karnataka Power Corporation Limited (KPCL), a State owned Generation Company for taking up the implementation of the projects:

| Sl. No. | Location | Name of the proposed Thermal Power Project | Proposed Capacity |
|---|---|---|---|
| 1 | 2 | 3 | 4 |
| | **MODIFIED PROJECTS** | | |
| 1 | KIADB's land near Vadlur and Chiksugur | Yermaras Thermal Power Project | 2x500MW |
| 2 | Yadgir | Yadgir Thermal Power Project | 2x500MW |
| 3 | Annechakanahalli | Annechakanahalli Thermal Power Project | 3x500MW |
| 4 | Kalgurki | Kalgurki Thermal Power Project | 3x500MW |
| | **NEW PROJECTS** | | |
| 1 | Mill reject area Shaktinagar | Edlapur Thermal Power Project | 1x500MW |
| 2 | i)BTPS Unit-3 Expansion project: Within the existing premises of Bellary Thermal Power Project.<br>ii) BTPS stage-II: Kudatini | BTPS Unit-3<br>Kudatini Thermal Power Project. | 1x500MW<br>3x500MW |

KPCL shall take necessary steps to prepare DPRs of the above projects and also take action to obtain all Statutory and Non-statutory Clearances from the respective authorities.

By order and in the name of the Governor of Karnataka,

PR. 1594

**SURESH B. KRISHNAPPANAVAR**

Under Secretary to Government,

Energy Department.

**Sub:** Four laning of Bangalore – Mysore Road (SH-17) – Shifting of RWS pipe line of Bidadi Combined Cycle Power Project.

**Read:**
1) Letter No. A1 R1 A(PS) / 56 dated 2.4.2007 of Managing Director, Karnataka Power Corporation Limited addressed to ACS & Principal Secretary, Energy Department. Government of Karnataka.
2) Minutes of High Power Committee (HPC) Meeting held on 31.07.2007 under the Chairmanship of Additional Chief Secretary to Govt. of Karnataka.

**Preamble**:

Managing Director, Karnataka Power Corporation Limited (KPCL) had drawn treated water to their Bidadi project from Rajarajeshwari Nagar through 21 Km length of pipeline of different dimensions at a cost of Rs.5.8 Crores during the year 2001. During the year 2002, the KRDCL wanted to widen the Bangalore – Mysore road to form 4 way lane road and wanted KPCL to move the pipe lines to the edge of proposed 4 way lane road for which KRDCL had agreed to bear the entire cost and deposited Rs.1.00 Crore to KPCL. The KPCL had given contract to pull out the pipelines and to re-lay them at the edge of 4 way lane. By the time the contractor had pulled out entire 21 Kms of water pipes and relayed about 10 Km of road at edge of 4 way lane road, the KRDCL wanted to further widen the Bangalore-Mysore road for accommodating 6 lanes and KPCL was asked to find out their own place by KRDCL for laying pipelines. KPCL had spent Rs.7.21 crores for relaying these pipelines. So far KRDCL has paid only an amount of Rs.1.00 Crore to KPCL. The balance amount of Rs.6.21 crores is due to be received from

KRDCL. The Accountant General has made an objection to get the balance amount reimbursed from KRDCL / PWD.

Managing Director, KPCL vide letter read at (1) above had suggested to refer the issue to the High Power Committee for an equitable decision in the matter. Further, MD, KPCL had requested the Energy Department to take up the matter with the Department of Public Sector Enterprises in terms of the G.O. No.DPAR 29 AMC 2004 dated 18.02.2005.

The High Power Committee Meeting was held on 31.07.2007 under the Chairmanship of Additional Chief Secretary to Government, Government of Karnataka for resolving the disputes between KPCL and KRDCL (vide Minutes of the Meeting read at (2) above). In the above meeting Managing Director, KRDCL informed that the KRDCL is executing the works against the planned budget provisions and there is no excess money available with KRDCL to settle the dues payable to KPCL. He further stated that the Board of KRDCL has said that KPCL has laid pipe lines on KRDCL road and it is the responsibility of KPCL to shift whenever the road is widened etc., and if the Public Works Department releases the money, KRDCL is ready to settle the dues.

After detailed discussions, it was felt that no one was at fault as at the time of laying of pipelines by KPCL, the Government, KRDCL had no plans of widening of the Bangalore-Mysore road initially. The additional expenditure incurred by KPCL to the extent of Rs.6.21 crore has become in-fructuous in view of the Government decision to widen the road to form 6 lanes.

Hence, there is no other option other than waiving off this in fructuous expenditure. The MD, KPCL agreed to this suggestion and it was decided to issue a suitably worded Government Order so as to drop the Accountant General's audit objection in this regard.

The Secretary, Finance Department who was present in the High Power Committee Meeting also concurred with the proposal to issue a suitable Government Order to waive off the in fructuous expenditure incurred by KPCL in order to settle the issue on as-is-where-is basis as both KRDCL and KPCL are the Government public sector undertakings. The Energy Department being Administrative Department for KPCL, the High Power Committee decided that the Energy Department shall issue Government Order in respect of absorbing the expenditure of Rs.6.21 crores incurred by KPCL so as to convince the Accountant General to drop the audit para.

This proposal has been examined and hence this order:

**GOVERNMENT ORDER No. DE 29 PPC 2001, Bangalore Dated 21st September 2007**

As per the decision taken in the High Power Committee meeting held on 31.07.2007, Government accords approval to waive off the additional expenditure incurred by KPCL to shift RWS pipe line of Bidadi Combined Cycle Power Project on KRDCL Road to the extent of Rs.6.21 crores so as to settle the issue on as is where is basis as both KPCL and KRDCL are the Government Public Sector Undertakings.

By order and in the name of the Governor of Karnataka,

PR. 1710

**SURESH B. KRISHNAPPANAVAR**

Under Secretary to Government,

Energy Department.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** 2007–08ನೇ ಸಾಲಿನ ಹೊಸ ಯೋಜನೆ –ಧಾರವಾಡದಲ್ಲಿ ಆಲೂರು ವೆಂಕಟರಾಯರ ಕಂಚಿನ ಪುತ್ಥಳಿ, ಪ್ರದರ್ಶನಾಂಗಣ ಹಾಗೂ ವಾಚನಾಲಯ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 137 ಕಸನಿ 2007, ದಿನಾಂಕ: 26–7–2007.

2. ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ/ 8/ ಸ್ಮಾರಕ/ 2007–08 ದಿನಾಂಕ: 7–8–2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿ: 26–7–2007ರ ಸರ್ಕಾರಿ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2007–08ನೇ ಸಾಲಿನ ಹೊಸ ಯೋಜನೆ–ಹೊಳೆ ಆಲೂರು ಅಭಿವೃದ್ಧಿ ಮತ್ತು ಆಲೂರು ವೆಂಕಟಾಯರ್ ಸ್ಮಾರಕ ನಿರ್ಮಾಣಕ್ಕೆ ತಾತ್ವಿಕ ಅನುಮೋದನೆ ನೀಡಲಾಯಿತು. ಅದರಂತೆ ಕ್ರಮ ಕೈಗೊಂಡ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು

ಮೇಲೆ (2)ರಲ್ಲಿ ಓದಲಾದ ದಿ: 7–8–2007ರ ಪತ್ರದಲ್ಲಿ ಈ ಯೋಜನೆಗೆ ಹಂಚಿಕೆ ಮಾಡಲಾದ ಒಟ್ಟು 125 ಲಕ್ಷ ರೂ.ಗಳಲ್ಲಿ ಹೊಳೆ ಆಲೂರಿನ ಅಭಿವೃದ್ಧಿಗಾಗಿ 25 ಲಕ್ಷ ರೂ.ಗಳ ಬಿಡುಗಡೆ ಪ್ರಸ್ತಾವನೆಯನ್ನು ಆ ನಂತರ ಸಲ್ಲಿಸುವುದಾಗಿ ತಿಳಿಸಿ, ಧಾರವಾಡದಲ್ಲಿ ಆಲೂರು ವೆಂಕಟರಾಯರ ಕಂಚಿನ ಪುತ್ಥಳಿ, ಪ್ರದರ್ಶನಾಂಗಣ ಹಾಗೂ ವಾಚನಾಲಯ ನಿರ್ಮಾಣಕ್ಕಾಗಿ 95 ಲಕ್ಷ ರೂ.ಗಳ ಪ್ರಸ್ತಾವನೆ ಕಳುಹಿಸಿ, ಸದರೀ ಮೊತ್ತವನ್ನು ಜಿಲ್ಲಾಧಿಕಾರಿ, ಧಾರವಾಡ ಅವರಿಗೆ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 25 ಸ್ಮಾಪ್ರನಿ 2007, ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2007.**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2007–08ನೇ ಸಾಲಿನ ಹೊಸ ಯೋಜನೆಗಳಡಿಯಲ್ಲಿ ಧಾರವಾಡದಲ್ಲಿ ಆಲೂರು ವೆಂಕಟರಾಯರ ಕಂಚಿನ ಪುತ್ಥಳಿ, ಪ್ರದರ್ಶನಾಂಗಣ ಹಾಗೂ ವಾಚನಾಲಯ ನಿರ್ಮಾಣಕ್ಕೆ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಸಲ್ಲಿಸಿರುವ ಅಂದಾಜು ಪಟ್ಟಿಗೆ ಈ ಮೂಲಕ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಈ ಯೋಜನೆಗಾಗಿ ನಿಗದಿಪಡಿಸಿದ 95 ಲಕ್ಷ ರೂ.ಗಳ ಪೈಕಿ ರೂ. 31,50,000/– ಗಳನ್ನು ಧಾರವಾಡ ಜಿಲ್ಲಾಧಿಕಾರಿಗಳಿಗೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಬಿಡುಗಡೆ ಮಾಡಲು, ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಅನುದಾನವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.
2. ಅನುದಾನವನ್ನು ಸಮರ್ಥ ರೀತಿಯಲ್ಲಿ ಬಳಕೆ ಮಾಡಿರುವುದಕ್ಕೆ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಸಂಬಂಧ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–4–25–015 (ಯೋಜನೆ) ಯಲ್ಲಿ ಭರಿಸತಕ್ಕದ್ದು.

ಆರ್ಥಿಕ ಇಲಾಖೆಯ ಸಹಮತಿಯನ್ನು ಅ.ಟಿ. ಆಇ 1343 ವೆಚ್ಚ 5/ 2007 ದಿ: 20–7–2007 ರಲ್ಲಿ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಸಹಮತಿಯನ್ನು ಅ.ಟಿ.ಸಂ.: ಯೋಇ 126 ಜಶ 2007 ದಿ: 25–7–2007ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1701

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಡಾ॥ ಬಿ.ಎಸ್. ನಟರಾಜ್, ನಿವೃತ್ತ ನಿರ್ದೇಶಕರು, ಆಯುಷ್ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ: ಸಿಆಸುಇ 54 ಎಸ್ಇಎನ್ 06, ದಿನಾಂಕ: 14–6–2007.
2. ಡಾ॥ ಬಿ.ಎಸ್. ನಟರಾಜ್, ನಿವೃತ್ತ ನಿರ್ದೇಶಕರು, ಆಯುಷ್ ಇಲಾಖೆ, ಅವರ ದಿನಾಂಕ: 18–7–2007ರ ಉತ್ತರ.

**ಪ್ರಸ್ತಾವನೆ :**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ i) ನಿಯಮ ಬಾಹಿರವಾಗಿ ವೃತ್ತಿ ತಜ್ಞತೆ ಮತ್ತು ಕೌಶಲ್ಯಕ್ಕೆ ವಿರುದ್ಧವಾಗಿ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆಯಲ್ಲಿ ಔಷಧಿ ವಿತರಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಜಿಯಾವುಲ್ಲಾಖಾನ್ ಅವರನ್ನು ಸರ್ಕಾರಿ ಆಯುರ್ವೇದ ಔಷಧಾಲಯ, ಮಾದೇನಹಳ್ಳಿಯಲ್ಲಿ ಔಷಧಿ ವಿತರಕರಾಗಿ ಕೆಲಸ ಮಾಡುತ್ತಿದ್ದ ಶ್ರೀ ಆಂಜನಪ್ಪರವರ ಜಾಗಕ್ಕೆ ಪರಸ್ಪರ ವರ್ಗಾವಣೆ ಮಾಡಿರುವ ಆರೋಪ ii) ಗುಲ್ಬರ್ಗಾದ ಆಯುಷ್ಯ ಕಛೇರಿಯಲ್ಲಿ ಸ್ಟೆನೋಗ್ರಾಫರ್ ಆಗಿದ್ದ ಶ್ರೀಮತಿ ಜಿ. ವರಲಕ್ಷ್ಮಿ ಎಂಬ ಪರಿಶಿಷ್ಟ ಜಾತಿಗೆ ಸೇರಿದ ಮಹಿಳೆಯು ಮಾರ್ಚ್ 2000ರಲ್ಲಿ ಪದೋನ್ನತಿಗಾಗಿ ಅರ್ಜಿ ಸಲ್ಲಿಸಿದ್ದರೂ 5 ವರ್ಷಗಳ ಸೇವೆ ಮುಗಿದ ತಕ್ಷಣ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ವೃಂದ ಬದಲಾವಣೆಗೆ ಅವಕಾಶವಿದ್ದರೂ ಅವರ ಅರ್ಜಿಯನ್ನು ಪರಿಗಣಿಸದೇ ಇರುವ ಆರೋಪ, iii) ಶ್ರೀ ಬಿ.ಎಂ. ಕೊಟಗಿ ಸ್ಟೆನೋಗ್ರಾಫರ್ ಇವರಿಗೆ ಅವರು ಅರ್ಜಿ ಸಲ್ಲಿಸಿದ 24 ಗಂಟೆ ಒಳಗೆ ಪ್ರಥಮ ದರ್ಜೆ ಸಹಾಯಕರಾಗಿ ವೃಂದ ಬದಲಾವಣೆ ನೀಡಿ ಅಧೀಕ್ಷಕರ ಹುದ್ದೆಯ ಪ್ರಥಮ ಬಿಂಧುವನ್ನು ಪರಿಶಿಷ್ಠ ಜಾತಿಗೆ ನೀಡಬೇಕಿದ್ದರೂ ಪರಿಗಣಿಸದೆ ಇರುವ ಆರೋಪ iv) 9 ಅಧೀಕ್ಷಕರುಗಳಿಗೆ 6 ಪ್ರಥಮ ದರ್ಜೆ ಸಹಾಯಕರಿಗೆ 4 ದ್ವಿತೀಯ ದರ್ಜೆ ಸಹಾಯಕರಿಗೆ 5 ಹಿರಿಯ ಬೆರಳಚ್ಚುಗಾರರಿಗೆ ಆರ್ಥಿಕ ಮಿತಿ ನ್ಯಾಯ ಕ್ರಮಗಳ ಪಾಲನೆಗೆ ಹೊರಡಿಸಿದ ಸರ್ಕಾರದ ಆದೇಶ

ಸಂಖ್ಯೆ ಆಇ 3 ಬಿಇಎಂ 2001, ದಿನಾಂಕ: 17–10–2001ನ್ನು ಉಲ್ಲಂಘಿಸಿ ವಿವಿಧ ವೃಂದಗಳ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿ ಹೊರಡಿಸಿ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಹೊರಡಿಸುವ ಮೊದಲೇ ಇವರುಗಳಿಗೆ ನ್ಯಾಯಾಲಯದ ತೀರ್ಪಿನ ವಿರುದ್ಧವಾಗಿ ಪದೋನ್ನತಿ ನೀಡಿರುವ ಆರೋಪ v) ದ್ರವ್ಯಗುಣ ಸ್ನಾತಕೋತ್ತರ ಕೋರ್ಸಿಗೆ ಆಯ್ಕೆ ಹೊಂದಿ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾ ವಿದ್ಯಾಲಯ, ಬೆಂಗಳೂರು ಇಲ್ಲಿ ಪ್ರವೇಶ ಹೊಂದಿದ ಡಾ॥ ಶಶಿರೇಖಾ ಇವರನ್ನು ನಿಯಮ ಉಲ್ಲಂಘಿಸಿ ಪರಸ್ಪರ ವರ್ಗಾವಣೆ ಮಾಡಿರುವ ಆರೋಪ vi) ಟೆಂಡರ್ ನಿಷ್ಕರ್ಷೆಗೊಳಿಸುವ ಸಮಿತಿಯ ಕಾರ್ಯದರ್ಶಿಯಾಗಿಯು ನಂತರ ಅಧ್ಯಕ್ಷರಾಗಿ ಟೆಂಡರ್ ನಿಯಮಗಳನ್ನು ಮತ್ತು ಪಾರದರ್ಶಕ ಅಧಿನಿಯಮಗಳ್ನನು ಉಲ್ಲಂಘಿಸಿರುವ ಆರೋಪಗಳಿಗಾಗಿ ಡಾ॥ ಬಿ.ಎಸ್. ನಟರಾಜ್, ನಿವೃತ್ತ ನಿರ್ದೇಶಕರು ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 14–6–2007ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಆರೋಪಿತರು ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 18–7–07ರಂದು ಉತ್ತರ ಸಲ್ಲಿಸಿ, ತಮ್ಮ ಮೇಲೆ ಮಾಡಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ವಿರುದ್ಧ ಮಾಡಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 54 ಎಸ್ಇಎನ್ 2006, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಡಾ॥ ಬಿ.ಎಸ್. ನಟರಾಜ್, ನಿವೃತ್ತ ನಿರ್ದೇಶಕರು, ಆಯುಷ್ ಇಲಾಖೆ ಇವರ ವಿರುದ್ಧ ಮಾಡಲಾದ ಆರೋಪಗಳು ಕುರಿತಂತೆ ವಿಚಾರಣೆ ಮಾಡಲು ಶ್ರೀ ಟಿ. ಸಂತಾನಂ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿರುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 05 ದಿನಾಂಕ: 23–8–2005 ರನ್ವಯ ರೂ. 6,000/– ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ದಿನಾಂಕ: 4–3–2002ರಂತೆ ರೂ. 1000/– ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮುಖ್ಯ ಆಡಳಿತಾಧಿಕಾರಿಗಳು, ಭಾರತೀಯ ವೈದ್ಯ ಪದ್ಧತಿಗಳು (ಆಯುಷ್), ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ ನಿರ್ದೇಶನಾಲಯ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿರುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು. ವಿಚಾರಣೆಗೆ ಸೂಕ್ತ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾಧಿಗಳನ್ನು ಒದಗಿಸಲು ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ ನಿರ್ದೇಶನಾಲಯ, ಬೆಂಗಳೂರು ಇವರು ಕ್ರಮ ಕೈಗೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1707

**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಗ್ರಾಮ ಸಹಾಯಕರ ಮಿತವೇತನವನ್ನು ಹೆಚ್ಚಿಸಿದ್ದು, ದಿನಾಂಕ: 1–4–2005ರಿಂದ ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಂ.ಇ.1. ಬಿಎಸ್‌ಸಿ.2005, ದಿ: 8–8–2005.
2. ಕರ್ನಾಟಕ ರಾಜ್ಯ ಸರ್ಕಾರಿ ಕಂದಾಯ ಇಲಾಖೆ ಗ್ರಾಮಸಹಾಯಕರ ಸಂಘದ ಮನವಿ ದಿನಾಂಕ: 15–5–2007.

**ಪ್ರಸ್ತಾವನೆ :**

ಸರ್ಕಾರದ ಆದೇಶ ಸಂಖ್ಯೆ: ಕಂ.ಇ. 1. ಬಿಎಸ್‌ಸಿ. 2005, ದಿನಾಂಕ: 8–8–2005ರಲ್ಲಿ ಗ್ರಾಮಸಹಾಯಕರ ಮಾಸಿಕ ಮಿತವೇತನವನ್ನು ರೂ. 1000/– ದಿಂದ ರೂ. 2000/– ರವರೆಗೆ ಹೆಚ್ಚಿಸಿದೆ. ಸದರಿ ಆದೇಶ ಹೊರಡಿಸಿದ ದಿನಾಂಕದಿಂದ ಈ ಆದೇಶವು ಜಾರಿಗೆ ಬರುವಂತೆ ಮೇಲೆ ಓದಲಾದ (1)ರಲ್ಲಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯ ಸರ್ಕಾರಿ ಕಂದಾಯ ಇಲಾಖೆ ಗ್ರಾಮಸಹಾಯಕರ ಸಂಘದ ಪದಾಧಿಕಾರಿಗಳು ದಿನಾಂಕ: 16–5–07ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ ಗ್ರಾಮಸಹಾಯಕರಿಗೆ 2005ನೇ ಸಾಲಿನಿಂದ ಮಾಸಿಕ ರೂ. 1000ರಿಂದ

ರೂಪಾಯಿ 2000/–ಕ್ಕೆ ಮಿತವೇತನವನ್ನು ಹೆಚ್ಚಿಸಿದ್ದು ಈ ಮಿತವೇತನವನ್ನು ಬಟವಾಡೆ ಮಾಡುವಾಗ ದಿನಾಂಕ: 1–4–2005 ರಿಂದ 7–8–2005 ರವರೆಗೆ ನಾಲ್ಕು ತಿಂಗಳು 7 ದಿನಗಳ ಮಿತವೇತನವು ಬಾಕಿ ಇದ್ದು, ಈ ಮಿತವೇತನವನ್ನು ಗ್ರಾಮಸಹಾಯಕರುಗಳಿಗೆ ಬಿಡುಗಡೆಗೊಳಿಸಬೇಕೆಂದು ಮೇಲೆ ಓದಲಾದ (2)ರಲ್ಲಿ ಕೋರಿ ಕೊಂಡಿದ್ದಾರೆ.

ಮೇಲ್ಕಂಡ ಸದರಿ ಸಂಘದ ಮನವಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಸದರಿ ಗ್ರಾಮಸಹಾಯಕರ ಮಾಸಿಕ ಸಂಭಾವನೆಯನ್ನು ಸರ್ಕಾರದ ಆದೇಶ ಸಂಖ್ಯೆ: ಕಂ.ಇ.1 ಬಿಎಸ್‌ಸಿ. 2005, ದಿನಾಂಕ: 8–8–2005ರಲ್ಲಿ ಹೆಚ್ಚಿಸಲಾದ ಸಂಭಾವನೆಯನ್ನು (ರೂ. 2000/–pm) ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದ್ದನ್ನು ಮಾರ್ಪಡಿಸಿ ಗ್ರಾಮಸಹಾಯಕರಿಗೆ ಹೆಚ್ಚಿಸಲಾದ ಪ್ರತಿತಿಂಗಳ ರೂ. 2000/– ಮಿತವೇತನವನ್ನು ದಿನಾಂಕ: 1–4–2005ರಿಂದಲೇ ಜಾರಿಗೆ ಬರುವಂತೆ ನೀಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 107 ಬಿಎಸ್‌ಸಿ 2007, ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂ: ಕಂ.ಇ. 1 ಬಿ.ಎಸ್.ಸಿ. 2005, ದಿನಾಂಕ: 8–8–2005ರಲ್ಲಿ ಗ್ರಾಮಸಹಾಯಕರ ಮಾಸಿಕ ಸಂಭಾವನೆಯನ್ನು ರೂ. 1000/– ದಿಂದ ರೂ. 2000/– ಕ್ಕೆ ದಿ: 8–8–2005ರಿಂದ ಜಾರಿಗೆ ಬರುವುದೆಂದು ಆದೇಶಿಸಿರುವುದನ್ನು ಭಾಗಶಃ ಮಾರ್ಪಡಿಸಿ, ಸದರಿ ಗ್ರಾಮಸಹಾಯಕರ ಮಿತವೇತನವನ್ನು ದಿ: 1–4–2005 ರಿಂದಲೇ ಅನ್ವಯಿಸುವಂತೆ ರೂ. 1000/– ರಿಂದ ರೂ. 2000/– ರವರೆಗೆ ಹೆಚ್ಚಿಸಿ ಆದೇಶಿಸಿದೆ.

ಗ್ರಾಮಸಹಾಯಕರಿಗೆ ಪರಿಷ್ಕೃತ ವೇತನವನ್ನು ದಿನಾಂಕ: 1–4–2005ರಿಂದ ಅನ್ವಯವಾಗುವಂತೆ ಆದೇಶಿಸಿರುವುದರಿಂದ, ದಿನಾಂಕ: 1–4–2005ರಿಂದ ದಿ: 7–8–2005ರವರೆಗಿನ ಬಾಕಿ ಮೊತ್ತ ಪಾವತಿಸಲು ಅಗತ್ಯವಿರುವ ಮೊತ್ತ ರೂ. 400.00 ಲಕ್ಷಗಳನ್ನು, ಲೆಕ್ಕಶೀರ್ಷಿಕೆ ``2029-00-101-1-01-015 subsidy Expenses (NP)" ಅಡಿಯಲ್ಲಿ ಹೆಚ್ಚುವರಿ ಅನುದಾನವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ. 178 ಬಿ.ಆರ್.ಎಸ್. 2007 ದಿನಾಂಕ: 13–8–2007ರಲ್ಲಿ ಆರ್ಥಿಕ ಇಲಾಖೆಯು ಮಂಜೂರು ಮಾಡಿರುವುದರಿಂದ ದಿನಾಂಕ: 1–4–2005 ರಿಂದ 7–8–2005ರವರೆಗಿನ ಬಾಕಿ ಮೊತ್ತ ಪಾವತಿಸಲು ರೂ. 400.00 ಲಕ್ಷಗಳನ್ನು ಬಿಡುಡೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1813

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ

(ಪರಿಹಾರ ಮತ್ತು ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಡಿ.ಎಸ್. ಶಿವಣ್ಣ, ನಿವೃತ್ತ ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇವರ ಮೇಲಿನ ಸಾಬೀತಾಗಿರುವ ಆರೋಪಕ್ಕೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂ: ಸಿಆಸುಇ 114 ಎಸ್‌ಇಎನ್ 04 ದಿ: 17–9–04.
2. ಶ್ರೀ ಡಿ.ಎಸ್. ಶಿವಣ್ಣ ಇವರ ಪ್ರತಿರಕ್ಷಣಾ ಹೇಳಿಕೆ ದಿ: 27–10–04.
3. ಸರ್ಕಾರದ ಆದೇಶ ಸಂ: ಸಿಆಸುಇ 114 ಎಸ್‌ಇಎನ್ 04 ದಿ: 11–2–05.
4. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿ: 21–7–05.
5. ಆಪಾದಿತರಿಗೆ ಜಾರಿ ಮಾಡಲಾದ 2ನೇ ಕಾರಣ ಕೇಳುವ ನೋಟೀಸ್ ಸಂ: ಸಿಆಸುಇ 114 ಎಸ್‌ಇಎನ್ 04 ದಿ: 6–8–05.
6. ಆಪಾದಿತರ ಪ್ರತಿರಕ್ಷಣಾ ಹೇಳಿಕೆ ದಿ: 14–9–05.
7. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಇವರ ಪತ್ರ ಸಂಖ್ಯೆ: ಪಿಎಸ್‌ಸಿ 73 ಸಿಎನ್‌ಎಸ್ 07/ಪಿಎಸ್‌ಸಿ ದಿ: 22–8–07.

**ಪ್ರಸ್ತಾವನೆ :**

ಶ್ರೀ ಡಿ.ಎಸ್. ಶಿವಣ್ಣ, ನಿವೃತ್ತ ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇವರು ಈ ಹಿಂದೆ ಸಚಿವಾಲಯದ ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಪ್ರವಾಸೋದ್ಯಮ ಇಲಾಖೆಯಲ್ಲಿನ ಪ್ರವಾಸಿ ಪ್ರವರ್ತಕರಾಗಿ ಕಾರ್ಯನಿರ್ವಹಿಸುತ್ತಿದ್ದವರನ್ನು ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸುವ ಪ್ರಸ್ತಾವನೆಗೆ ಆರ್ಥಿಕ ಇಲಾಖೆ, ಸಿಆಸುಇ (ಸೇವಾ ನಿಯಮಗಳು) ಹಾಗೂ ಕಾನೂನು ಇಲಾಖೆಯೊಡನೆ ಸಮಾಲೋಚನೆಯಲ್ಲಿರುವಾಗಲೇ ಮೇಲಾಧಿಕಾರಿಗಳ ಯಾವುದೇ ಸೂಚನೆಯಿಲ್ಲದೆ ಹಾಗೂ ಅವರಿಂದ ಅನುಮೋದನೆ ಪಡೆಯದೇ, ಕಛೇರಿಯ ವಿಧಿ ವಿಧಾನಗಳನ್ನು ಪಾಲಿಸದೆ ತೂರಿ 42

ಪ್ರವಾಸೋದ್ಯಮ ಪ್ರವರ್ತಕರ ಸೇವೆಯನ್ನು ಖಾಯಂಗೊಳಿಸಿ ಆದೇಶ ಹೊರಡಿಸಿರುವ ಆರೋಪಕ್ಕಾಗಿ ಮೇಲೆ (1)ರಲ್ಲಿ ಓದಲಾದ ದಿ: 17–9–04ರಂದು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು, 1957ರ ನಿಯಮ 11 ಮತ್ತು 11–ಎ ರಡಿಯಲ್ಲಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ, ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಆಪಾದಿತರಾದ ಶ್ರೀ ಡಿ.ಎಸ್. ಶಿವಣ್ಣ ಇವರು ದಿ: 27–10–04ರಂದು ನೋಟೀಸಿಗೆ ಪ್ರತಿ ರಕ್ಷಣಾ ಹೇಳಿಕೆ ಸಲ್ಲಿಸಿರುತ್ತಾರೆ. ಇವರ ಪ್ರತಿರಕ್ಷಣಾ ಹೇಳಿಕೆಯಲ್ಲಿ ಸಮರ್ಪಕ ಕಾರಣಗಳು ಇಲ್ಲದೇ ಇರುವುದರಿಂದ ಅವರ ಹೇಳಿಕೆಯನ್ನು ಸರ್ಕಾರವು ತಳ್ಳಿ ಹಾಕಿ ವಿಚಾರಣೆ ನಡೆಸಲು ಮೇಲೆ (3) ರಲ್ಲಿ ಓದಲಾದ ದಿ: 11–2–04ರ ಸರ್ಕಾರದ ಆದೇಶದಲ್ಲಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾದ ಶ್ರೀ ಎನ್.ಎಸ್. ಸಂಗೊಳ್ಳಿ ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಸರ್ಕಾರದ ಅಧೀನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ (ವಾರ್ತಾ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರವಾದ ಸರ್ಕಾರಕ್ಕೆ ದಿ: 21–7–05ರಂದು ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿನ ನಿರ್ಣಯದಂತೆ ಆಪಾದಿತರ ಮೇಲಿನ ಆರೋಪವು ಸಾಬೀತಾಗಿದ್ದರಿಂದ, ಮೇಲೆ (5)ರಲ್ಲಿ ಓದಲಾದ ದಿ: 6–8–05ರಂದು ವಿಚಾರಣಾ ವರದಿಯ ಪ್ರತಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸ್ ಮೂಲಕ ಜಾರಿಗೊಳಿಸಲಾಗಿತ್ತು. ಆಪಾದಿತರು ವಿಚಾರಣಾ ವರದಿಯಲ್ಲಿನ ನಿರ್ಣಯದ ವಿರುದ್ಧ ರಕ್ಷಣಾ ಹೇಳಿಕೆಯನ್ನು ದಿ: 14–9–05ರಂದು ಸಲ್ಲಿಸಿ, ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಅಲ್ಲಗಳೆಯದೆ ಕೇವಲ ವಿಚಾರಣಾಧಿಕಾರಿಗಳು ಸಿ.ಸಿ.ಎ. ನಿಯಮಗಳಡಿಯಲ್ಲಿ ಸರಿಯಾಗಿ ವಿಚಾರಣೆ ನಡೆಸಿಲ್ಲವೆಂದು ತಿಳಿಸಿ, ತಮ್ಮನ್ನು ದೋಷಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ವಿಚಾರಣಾ ವರದಿಯಲ್ಲಿನ ನಿರ್ಣಯ, ಆಪಾದಿತರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿದ್ದ ರಕ್ಷಣಾ ಹೇಳಿಕೆ ಹಾಗೂ ದಾಖಲೆಗಳನ್ನು ಪರಿಶೀಲಿಸಿದಾಗ, ನಿವೃತ್ತ ಆಪಾದಿತರಾದ ಶ್ರೀ ಡಿ.ಎಸ್. ಶಿವಣ್ಣ ಇವರು ಪ್ರವಾಸೋದ್ಯಮ ಇಲಾಖೆಯಲ್ಲಿನ 37 ಪ್ರವಾಸಿ ಪ್ರವರ್ತಕರನ್ನು ನಿಯಮ ಬಾಹಿರವಾಗಿ ಖಾಯಂಗೊಳಿಸಿರುವುದು ಸಾಬೀತಾಗಿದ್ದರಿಂದ ಹಾಗೂ ಸದರಿಯವರು ಸೇವೆಯಲ್ಲಿದ್ದಾಗ ಗಂಭೀರ ಸ್ವರೂಪದ ದುರ್ನಡತೆ ಎಸಗಿರುವುದು ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 214ರಡಿಯಲ್ಲಿ ಅವರ ನಿವೃತ್ತಿ ವೇತನದಿಂದ ಖಾಯಂ ಆಗಿ ಶೇಕಡ 50 ರಷ್ಟು ತಡೆಹಿಡಿಯುವ ದಂಡನೆ ವಿಧಿಸುವ ಬಗ್ಗೆ ಲೋಕ ಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 114 ಎಸ್ಇಎನ್ 2004, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಡಿ.ಎಸ್. ಶಿವಣ್ಣ, ನಿವೃತ್ತ ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇವರ ನಿವೃತ್ತಿ ವೇತನದಲ್ಲಿ ಶೇ. 50 ರಷ್ಟನ್ನು (ಶೇಖಡ ಐವತ್ತಷ್ಟು) ಖಾಯಂ ಆಗಿ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1708

**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀ ಶ್ಯಾಮರಾವ್ ಬಿ. ಕುಲಕರ್ಣಿ, ಅಂದಿನ ಉಗ್ರಾಣ ಅಧೀಕ್ಷಕರು ಮತ್ತು ಶ್ರೀ ಮಲ್ಲಣ್ಣ ಬಿ. ತಿಮ್ಮನ್ನಗೋಳ, ಲೆಕ್ಕಪರಿಶೋಧನಾಧಿಕಾರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ಇವರ ಮೇಲಿನ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆ ದೋಷಮುಕ್ತರನ್ನಾಗಿಸುವ ಬಗ್ಗೆ–ಆದೇಶ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ಇವರ ದಿ: 16–9–2002 ಮತ್ತು ದಿ: 5–3–2005ರ ವರದಿ.
2. ಕಾರಣ ಕೇಳುವ ನೋಟೀಸ್ ಸಂ: ಗ್ರಾಅಪ 21 ಇಎನ್ಕ್ಯೂ 98, ದಿ: 4–11–03 ಮತ್ತು 13–5–2005.
3. ಶ್ರೀ ಶ್ಯಾಮರಾವ್ ಬಿ. ಕುಲಕರ್ಣಿ, ಅಂದಿನ ಉಗ್ರಾಣ ಅಧೀಕ್ಷಕರು, ಕಾರಣ ಕೇಳುವ ನೋಟಿಸ್‌ಗೆ ನೀಡಿದ ಲಿಖಿತ ಉತ್ತರದ ದಿ: 28–4–04.

4. ಶ್ರೀ ಮಲ್ಲಣ್ಣ ಬಿ. ತಿಮ್ಮನ್ನಗೋಳ, ಲೆಕ್ಕಪರಿಶೋಧನಾಧಿಕಾರಿ, ಕಾರಣ ಕೇಳುವ ನೋಟಿಸ್‌ಗೆ ನೀಡಿದ ಲಿಖಿತ ಉತ್ತರದ ದಿ: 15–8–05.
5. ಆದೇಶ ಸಂಖ್ಯೆ: ಗ್ರಾಅಪ:21:ಇಎನ್‌ಕ್ಯೂ:98, ದಿ: 25–7–2005.
6. ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ನ್ಯಾಯಾಧೀಶರು, ಇವರ ಮನವಿ ದಿ: 20–8–05.
7. ಆದೇಶ ಸಂಖ್ಯೆ: ಗ್ರಾಅಪ 21 ಇಎನ್‌ಕ್ಯೂ 98, ದಿನಾಂಕ: 3–9–2005.
8. ವಿಚಾರಣಾಧಿಕಾರಿಗಳ ದಿನಾಂಕ: 12–3–2007ರ ವಿಚಾರಣಾ ವರದಿ.

**ಪ್ರಸ್ತಾವನೆ :**

1997–98ನೇ ಸಾಲಿನಲ್ಲಿ ರಾಯಚೂರು ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗದ ಉಗ್ರಾಣ ಸಾಮಗ್ರಿಗಳ ಖರೀದಿ ಅವ್ಯವಹಾರಕ್ಕೆ ಸಂಬಂಧಿಸಿದಂತೆ ಶ್ರೀ ಶ್ಯಾಮರಾವ್ ಬಿ. ಕುಲಕರ್ಣಿ, ಅಂದಿನ ಉಗ್ರಾಣ ಅಧೀಕ್ಷಕರು ಮತ್ತು ಶ್ರೀ ಮಲ್ಲಣ್ಣ ಬಿ. ತಿಮ್ಮನ್ನಗೋಳ, ಲೆಕ್ಕಪರಿಶೋಧನಾದಿಕಾರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ಇವರು ದಿ: 29–7–97ರಂದು ಜರುಗಿದ ಸಾಧನ ಸಾಮಗ್ರಿಗಳ ಖರೀದಿ ಸಮಿತಿ ಸಭೆಯಲ್ಲಿ ಮೊದಲು ಆರು ತಿಂಗಳಿಗೆ ಬೇಕಾಗುವ ರೂ. 274.20 ಲಕ್ಷ ಸಾಮಗ್ರಿಗಳನ್ನು ಖರೀದಿಸಲು ಅನುಮತಿ ನೀಡಲಾಗಿದ್ದರೂ ಸಹ, ಇವರು ಒಟ್ಟು ರೂ. 355.92 ಲಕ್ಷ ಸಾಮಗ್ರಿಗಳನ್ನು ಖರೀದಿ ಮಾಡಿ, ಖರೀದಿ ಸಮಿತಿ ನೀಡಿರುವ ಅನುಮೋದಿತ ಮೊತ್ತಕ್ಕಿಂತ ರೂ. 81.72 ಲಕ್ಷಗಳನ್ನು ಹೆಚ್ಚಿಗೆ ಸಾಮಗ್ರಿಗಳನ್ನು ತನ್ನ ವ್ಯಾಪ್ತಿ ಮೀರಿ ಖರೀದಿಸಿದ, ಕರ್ತವ್ಯಲೋಪವೆಸಗಿದ್ದಕ್ಕಾಗಿ ಹಾಗೂ ಇನ್ನಿತರ ಅಕ್ರಮಗಳಿಗೆ ಸಂಬಂಧಿಸಿದಂತೆ ಇವರ ಮೇಲೆ ಶಿಸ್ತು ಕ್ರಮ ಕೈಗೊಳ್ಳಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರಡು ದೋಷಾರೋಪಣಾ ಪಟ್ಟಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಶ್ಯಾಮರಾವ್ ಬಿ. ಕುಲಕರ್ಣಿ, ಅಂದಿನ ಉಗ್ರಾಣ ಅಧೀಕ್ಷಕರು ಇವರ ಮೇಲಿನ ಆರೋಪಗಳ ಬಗ್ಗೆ ಕನಾಸೇ (ವನಿಮೇ) 1957ರ ನಿಯಮ 11ರ ವಿಧಿ ವಿಧಾನಗಳಂತೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು, ಮೇಲೆ ಓದಲಾದ ಕ್ರಮ ಸಂ. (2) ದಿ: 4–11–03 ರಂದು ಇವರಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿತ್ತು. ನಂತರ ಮೇಲೆ ಓದಲಾದ ಕ್ರ.ಸಂ. (2)ರ ದಿ: 13–5–05ರಲ್ಲಿ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಶ್ರೀ ಮಲ್ಲಣ್ಣ ಬಿ. ತಿಮ್ಮನ್ನಗೋಳ, ಲೆಕ್ಕಪರಿಶೋಧನಾಧಿಕಾರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ಇವರಿಗೆ ಜಾರಿ ಮಾಡಿತ್ತು.

ಶ್ರೀ ಶ್ಯಾಮರಾವ್ ಬಿ. ಕುಲಕರ್ಣಿ, ಅಂದಿನ ಉಗ್ರಾಣ ಅಧೀಕ್ಷಕರು ಇವರು ತಮ್ಮ ಮೇಲಿನ ಆಪಾದನೆಗಳಿಗೆ ಸಂಬಂಧಿಸಿದಂತೆ, ಮೇಲೆ ಓದಲಾದ ಕ್ರಮ ಸಂ. (3)ರ ದಿ: 28–4–04ರಲ್ಲಿ ಲಿಖಿತ ಉತ್ತರ ಸಲ್ಲಿಸಿ, ತಮ್ಮ ಮೇಲೆ ಮಾಡಿರುವ ಎಲ್ಲಾ ಆರೋಪಗಳನ್ನು ನಿರಾಕರಿಸಿ, ಆರೋಪ ಮುಕ್ತಗೊಳಿಸುವಂತೆ ಕೋರಿದ್ದರು. ಸದರಿ ಲಿಖಿತ ಹೇಳಿಕೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಆಪಾದಿತರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬರುವುದರಿಂದ ಆಪಾದಿತರ ಮೇಲಿನ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಅರಿಯಲು ಪ್ರಕರಣದಲ್ಲಿ ಮೇಲೆ ಓದಲಾದ ಕ್ರಮ ಸಂ. (5)ರ ದಿ: 25–7–2005ರಂದು ಶ್ರೀ ಶ್ಯಾಮರಾವ್ ಬಿ. ಕುಲಕರ್ಣಿ, ಅಂದಿನ ಉಗ್ರಾಣ ಅಧೀಕ್ಷಕರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ಇವರ ಮೇಲಿನ ಆಪಾದನೆಗಳ ಬಗ್ಗೆ ಮಾತ್ರ ಕನಾಸೇ (ವ.ನಿ.ಮೇ) 1957ರ ನಿಯಮ 11ರಲ್ಲಿ ವಿವರವಾದ ವಿಚಾರಣೆ ನಡೆಸಲು, ಸದರಿ ನಿಯಮ 11(2)ರ ರೀತ್ಯ ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11 (5)ರ ರೀತ್ಯ ಸಹಾಯಕ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ರಾಯಚೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು. ಈ ಮಧ್ಯೆ ಶ್ರೀ ಮಲ್ಲಣ್ಣ ಬಿ. ತಿಮ್ಮನ್ನಗೋಳ, ಲೆಕ್ಕಪರಿಶೋಧನಾಧಿಕಾರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ಇವರು ದಿ: 15–8–05ರ ತಮ್ಮ ಲಿಖಿತ ಹೇಳಿಕೆಯಲ್ಲಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂ (6)ರ ದಿ: 20–8–2005ರ ಮನವಿಯಲ್ಲಿ ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರು, ತನಗೆ ರಾಯಚೂರಿನಲ್ಲಿ ವಿಚಾರಣೆ ನಡೆಸಲು ಅನಾನುಕೂಲವಾಗುತ್ತದೆಂಬ ಕಾರಣದಿಂದ ಈ ಪ್ರಕರಣದಲ್ಲಿ ವಿಚಾರಣೆ ನಡೆಸಬೇಕಾಗಿರುವ ಸ್ಥಳವನ್ನು ರಾಯಚೂರಿಗೆ ಬದಲಾಗಿ ಜಿಲ್ಲಾ ಪಂಚಾಯತ್ ಕಾರ್ಯಾಲಯ, ಬೆಂಗಳೂರು (ನಗರ) ಅಥವಾ (ಗ್ರಾಮಾಂತರ) ಕಛೇರಿಯನ್ನು ನಿಗದಿಪಡಿಸಲು ಪರಿಷ್ಕೃತ ಸರ್ಕಾರಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಪ್ರಕರಣದಲ್ಲಿ ಒಳಗೊಂಡ ಇಬ್ಬರು ಆಪಾದಿತರ ಮೇಲಿನ ಆರೋಪಗಳು ಒಂದೇ ವಿಷಯಕ್ಕೆ ಸಂಬಂಧಿಸಿರುವುದರಿಂದ ಇವರುಗಳ ಮೇಲಿನ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆಯನ್ನು ಒಬ್ಬರೇ ವಿಚಾರಣಾಧಿಕಾರಿಗಳು ನಡೆಸಬೇಕಾಗಿರುತ್ತದೆ. ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರು ಈ ವಿಚಾರಣೆಯನ್ನು ರಾಯಚೂರಿನಲ್ಲಿ ನಡೆಸಲು ಇಚ್ಚಿಸದಿರುವುದರಿಂದ, ಪ್ರಕರಣವನ್ನು ಹಿಂಪಡೆದು ಪ್ರಕರಣದಲ್ಲಿ ಬೇರೊಬ್ಬ

ವಿಚಾರಣಾಧಿಕಾರಿಯನ್ನು ನೇಮಿಸಲು ಸರ್ಕಾರವು ನಿರ್ಧರಿಸಿ, ಶ್ರೀ ಶ್ಯಾಮರಾವ್ ಬಿ. ಕುಲಕರ್ಣಿ, ಅಂದಿನ ಉಗ್ರಾಣ ಅಧೀಕ್ಷಕರು, ಇವರ ಮೇಲಿನ ಆರೋಪಗಳ ಬಗ್ಗೆ ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದ ಸಂ. ಗ್ರಾಅಪ:21:ಇಎನ್‌ಕ್ಯೂ:91, ದಿ: 25–7–2005ರ ಆದೇಶವನ್ನು ಹಿಂಪಡೆದು, ಶ್ರೀ ಶ್ಯಾಮರಾವ್ ಬಿ. ಕುಲಕರ್ಣಿ, ಅಂದಿನ ಉಗ್ರಾಣ ಅಧೀಕ್ಷಕರು ಮತ್ತು ಶ್ರೀ ಮಲ್ಲಣ್ಣ ಬಿ. ತಿಮ್ಮನ್ನಗೋಳ, ಲೆಕ್ಕಪರಿಶೋಧನಾಧಿಕಾರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ಇವರುಗಳ ಮೇಲಿನ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗಧಿಪಡಿಸಲಾದ ವಿಧಿವಿಧಾನಗಳನ್ನು ಅನುಸರಿಸಿ ನಿಯಮ 13ರನ್ವಯ ವಿವರವಾದ ಜಂಟಿ ವಿಚಾರಣೆ ನಡೆಸಲು ನಿಯಮ 11(2)ರ ರೀತ್ಯ ಸಹಾಯಕ ಕಾರ್ಯದರ್ಶಿ, (ಆಡಳಿತ) ಜಿಲ್ಲಾ ಪಂಚಾಯತ್, ರಾಯಚೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಅಧೀಕ್ಷಕರು (ಆಡಳಿತ) ಜಿಲ್ಲಾ ಪಂಚಾಯತ್, ರಾಯಚೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಆದೇಶದಲ್ಲಿ ಆದೇಶಿಸಿದೆ. ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ಆರೋಪಿತರುಗಳ ಮೇಲಿನ ಎಲ್ಲಾ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (8)ರಲ್ಲಿ ವಿಚಾರಣಾ ವರದಿ ಸಲ್ಲಿಸಿದ್ದರು.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ವಿಚಾರಣಾ ವರದಿಯನ್ನು ಒಪ್ಪಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 21 ಇಎನ್‌ಕ್ಯೂ 98, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್ 2007.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 1997–98ನೇ ಸಾಲಿನಲ್ಲಿ ರಾಯಚೂರು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದ ಉಗ್ರಾಣ ಸಾಮಾಗ್ರಿಗಳ ಖರೀದಿ ಅವ್ಯವಹಾರಕ್ಕೆ ಸಂಬಂಧಿಸಿದಂತೆ ಅಂದಿನ ಉಗ್ರಾಣ ಅಧೀಕ್ಷಕರಾದ ಶ್ರೀ ಶ್ಯಾಮರಾವ್ ಬಿ. ಕುಲಕರ್ಣಿ ಹಾಗೂ ಶ್ರೀ ಮಲ್ಲಣ್ಣ ಬಿ. ತಿಮ್ಮನಗೋಳ, ಅಂದಿನ ಲೆಕ್ಕಪರಿಶೋಧನಾಧಿಕಾರಿ ಇವರುಗಳ ಮೇಲಿನ ಆಪಾದನೆಗಳು ವಿಚಾರಣೆಯಲ್ಲಿ ರುಜುವಾತಾಗಿಲ್ಲದಿರುವುದರಿಂದ ಸರ್ಕಾರವು ಇವರ ಮೇಲಿನ ಅಪಾದನೆಗಳನ್ನು ಕೈಬಿಟು ಇವರುಗಳನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1709

**ಎನ್.ವೈ. ಸಾಗರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ
(ಸೇವೆಗಳು–ಎ)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ರಾಜ್ಯದ ತಾಲ್ಲೂಕು ಕೇಂದ್ರಗಳಲ್ಲಿ ಸಾಮರ್ಥ್ಯಸೌಧ ನಿರ್ಮಾಣ ಮಾಡಲು ಗ್ರಾಮ ಸ್ವರಾಜ್ ಯೋಜನೆಯಡಿ ಅನುದಾನ ಬಿಡುಗಡೆ ಮಾಡುವ ಕುರಿತು.

**ಪ್ರಸ್ತಾವನೆ :**

ವಿಶ್ವಬ್ಯಾಂಕ್ ನೆರವಿನ ಗ್ರಾಮ ಸ್ವರಾಜ್–ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಯಲ್ಲಿ ಸಾಮರ್ಥ್ಯಸೌಧ ನಿರ್ಮಾಣ ಮಾಡಲು ಅಂದಾಜುಪಟ್ಟಿಗಳನ್ನು ನಿಗಧಿತ ವಿನ್ಯಾಸದಲ್ಲಿ ತಯಾರಿಸಿ ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿಯನ್ನು ಪಡೆದು ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ಕಳುಹಿಸಲು ತಿಳಿಸಲಾಗಿತ್ತು. ಅದರಂತೆ, 31 ತಾಲ್ಲೂಕುಗಳಿಂದ ಪ್ರಸ್ತಾವನೆಗಳು ಬಂದಿದ್ದು, ಅವುಗಳಿಗೆ ಅನುದಾನವನ್ನು ಬಿಡುಗಡೆ ಮಾಡಬೇಕಾಗಿದೆ ಹಾಗೂ ಹಾವೇರಿ ಜಿಲ್ಲೆಯ ಸವಣೂರು ತಾಲ್ಲೂಕು ಸಾಮರ್ಥ್ಯಸೌಧ ನಿರ್ಮಾಣಕ್ಕಾಗಿ 2006–07ನೇ ಸಾಲಿಗೆ ಬಿಡುಗಡೆ ಮಾಡಲಾದ ರೂ. 6.00 ಲಕ್ಷಗಳ ಪೈಕಿ ರೂ. 4,000–00 ಮಾತ್ರ ವೆಚ್ಚ ಮಾಡಿದ್ದು, ಮಾರ್ಚಿ 2007ರ ಅಂತ್ಯಕ್ಕೆ ವಿನಿಯೋಗಿಸದೇ ಇರುವುದರಿಂದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಹಾವೇರಿ ಜಿಲ್ಲೆ ಇವರು ಮಾನ್ಯತಾ ಅವಧಿಯನ್ನು ವಿಸ್ತರಿಸಲು ಕೋರಿದ್ದಾರೆ. ಸದರಿ ಅನುದಾನ ಆರ್ಥಿಕ ವರ್ಷದ ಅಂತ್ಯದಲ್ಲಿ ವೆಚ್ಚವಾಗದೆ ಇರುವುದರಿಂದ ಲ್ಯಾಪ್ಸ್‌ವಾಗಿದೆ. ಆದ್ದರಿಂದ ರೂ. 5.96 ಲಕ್ಷ ಬಿಡುಗಡೆ ಮಾಡಬೇಕಾಗಿರುತ್ತದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 119 ಗ್ರಾಸ್ವಯೋ 2007, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2007.**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಇದಕ್ಕೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿರುವಂತೆ 32 ತಾಲ್ಲೂಕು ಪಂಚಾಯತ್‌ಗಳಿಗೆ ಅವುಗಳಿಗೆ ಎದುರಿಗೆ ಅನುಬಂಧದ ಕಾಲಂ 7ರಲ್ಲಿ ತೋರಿಸಿದಂತೆ ಒಟ್ಟು ರೂ. 253.96 ಲಕ್ಷ (ಎರಡು ನೂರ ಐವತ್ಮೂರು ಲಕ್ಷ ತೊಂಭತ್ತಾರು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಸರ್ಕಾರ ಬಿಡುಗಡೆ ಮಾಡಿದೆ.

ತಾಲ್ಲೂಕು ಪಂಚಾಯತ್‌ಗಳು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಅದಕ್ಕೆ ಸಂಬಂಧಿಸಿದ ನಿಯಮಗಳು ಹಾಗೂ ಗ್ರಾಮ ಸ್ವರಾಜ್ ಯೋಜನೆಯಲ್ಲಿ ಹೊರಡಿಸಿದ ಸಂಗ್ರಹಣಾ ಕೈಪಿಡಿ ಅನ್ವಯ ಸಾಮರ್ಥ್ಯಸೌಧದ ನಿರ್ಮಾಣ ಕಾರ್ಯವನ್ನು ಕೈಗೊಳ್ಳಲು ಸೂಚಿಸಿದೆ. ಸದರಿ ವೆಚ್ಚವನ್ನು 2007–08ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2515–00–101–0–80–059 (ಯೋಜನೆ) ಕರ್ನಾಟಕ ಗ್ರಾಮೀಣ ಬಡತನ ಹಾಗೂ ಪಂಚಾಯತಿ ಯೋಜನೆಯಡಿಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: FD 7 ZPA 2003, ದಿನಾಂಕ: 14–7–2005ರ ಸೂಚನೆಗಳನ್ವಯ ಭರಿಸುವುದು. ತಾಲ್ಲೂಕು ಪಂಚಾಯತ್‌ಗಳು ಮಾಸಿಕ ವರದಿಯನ್ನು ನಿಗಧಿಪಡಿಸಿದ ನಮೂನೆಯಲ್ಲಿ ಸಲ್ಲಿಸುವುದು. ಅನುಬಂಧದ ಕಾಲಂ 4ರಲ್ಲಿ ತಿಳಿಸಿದ ಅಂದಾಜು ಮೊತ್ತವು ರೂ. 16.00 ಲಕ್ಷ ಮೀರಿದ್ದಲ್ಲಿ ಹೆಚ್ಚುವರಿ ವೆಚ್ಚವನ್ನು ಈಗಾಗಲೇ ತಾಲ್ಲೂಕು ಪಂಚಾಯತಿ ನಿರ್ಣಯಿಸಿದಂತೆ ತಾಲ್ಲೂಕು ಪಂಚಾಯತಿಗಳ ಸಂಪನ್ಮೂಲಗಳಿಂದಲೇ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10–7–1996ರಲ್ಲಿ ಆಡಳಿತಾತ್ಮಕ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವೀರಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 119 ಗ್ರಾಸ್ವಯೋ 2007, ದಿನಾಂಕ: 28–9–2007ರ ಅನುಬಂಧ ಸಾಮರ್ಥ್ಯಸೌಧ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆ**

| ಕ್ರ.ಸಂ. | ಜಿಲ್ಲೆ | ತಾಲ್ಲೂಕು ಪಂಚಾಯತ್ | ಅಂದಾಜು ಮೊತ್ತ | ಯೋಜನೆಯಡಿ ನಿಗಧಿಯಾದ ಮೊತ್ತ | ಮೊದಲನೇ ಕಂತಾಗಿ ಬಿಡುಗಡೆ ಮಾಡಿದ ಮೊತ್ತ | ಒಟ್ಟು ಮೊತ್ತ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಹಾಸನ | 1) ಅರಕಲಗೂಡು | 16.00 | 16.00 | 8.00 | 16.00 |
| | | 2) ಬೇಲೂರು | 20.00 | 16.00 | 8.00 | |
| 2 | ಗುಲ್ಬರ್ಗ | 3) ಅಫ್ಜಲ್‌ಪುರ | 21.50 | 16.00 | 8.00 | 8.00 |
| 3 | ಶಿವಮೊಗ್ಗ | 4) ಸೊರಬ | 18.50 | 16.00 | 8.00 | 16.00 |
| | | 5) ಭದ್ರಾವತಿ | 20.00 | 16.00 | 8.00 | |
| 4 | ಉತ್ತರಕನ್ನಡ | 6) ಯಲ್ಲಾಪುರ | 18.50 | 16.00 | 8.00 | 32.00 |
| | | 7) ಜೊಯಡಾ | 16.00 | 16.00 | 8.00 | |
| | | 8) ಅಂಕೋಲಾ | 19.50 | 16.00 | 8.00 | |
| | | 9) ಭಟ್ಕಳ | 16.00 | 16.00 | 8.00 | |
| 5 | ಚಿಕ್ಕಮಗಳೂರು | 10) ಚಿಕ್ಕಮಗಳೂರು | 18.50 | 16.00 | 8.00 | 24.00 |
| | | 11) ಕೊಪ್ಪ | 19.00 | 16.00 | 8.00 | |
| | | 12) ನರಸಿಂಹರಾಜಪುರ | 16.75 | 16.00 | 8.00 | |
| 6 | ಗದಗ | 13) ಗದಗ | 17.50 | 16.00 | 8.00 | 40.00 |
| | | 14) ಮುಂಡರಗಿ | 20.00 | 16.00 | 8.00 | |
| | | 15) ನರಗುಂದ | 20.00 | 16.00 | 8.00 | |
| | | 16) ರೋಣ | 17.50 | 16.00 | 8.00 | |
| | | 17) ಶಿರಹಟ್ಟಿ | 20.00 | 16.00 | 8.00 | |
| 7 | ಧಾರವಾಡ | 18) ಕಲಘಟಗಿ | 16.00 | 16.00 | 8.00 | 24.00 |
| | | 19) ಕುಂದಗೋಳ | 16.00 | 16.00 | 8.00 | |
| | | 20) ನವಲಗುಂದ | 18.70 | 16.00 | 8.00 | |
| 8 | ರಾಯಚೂರು | 21) ದೇವದುರ್ಗ | 16.00 | 16.00 | 8.00 | 40.00 |
| | | 22) ಲಿಂಗಸುಗೂರು | 20.00 | 16.00 | 8.00 | |
| | | 23) ಮಾನ್ವಿ | 27.00 | 16.00 | 8.00 | |

| | | | | | | |
|---|---|---|---|---|---|---|
| | | 24) ರಾಯಚೂರು | 16.00 | 16.00 | 8.00 | |
| | | 25) ಸಿಂಧನೂರು | 27.00 | 16.00 | 8.00 | |
| 9 | ತುಮಕೂರು | 26) ಗುಬ್ಬಿ | 20.00 | 16.00 | 8.00 | |
| | | 27) ಕುಣಿಗಲ್ | 20.00 | 16.00 | 8.00 | |
| | | 28) ಮಧುಗಿರಿ | 16.00 | 16.00 | 8.00 | 40.00 |
| | | 29) ಪಾವಗಡ | 18.80 | 16.00 | 8.00 | |
| | | 30) ಶಿರಾ | 18.80 | 16.00 | 8.00 | |
| 10 | ಮಂಡ್ಯ | 31) ಕೃಷ್ಣರಾಜಪೇಟೆ | 19.00 | 16.00 | 8.00 | 8.00 |
| 11 | ಹಾವೇರಿ | 32) ಸವಣೂರು | 19.90 | 16.00 | 5.96 | 5.96 |
| | | | | | ಒಟ್ಟು ಮೊತ್ತ | 253.96 |

ಬಿ. ವೀರಣ್ಣ

ಪಿ.ಆರ್.1815 ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

## ಕಾರ್ಮಿಕ ಸಚಿವಾಲಯ

**ವಿಷಯ :** ಉದ್ಯೋಗ ಮತ್ತು ತರಬೇತಿ ಇಲಾಖೆಯಿಂದ ನಡೆಸಲಾಗುವ ಪರೀಕ್ಷೆಗಳನ್ನು ಕ್ರಮಬದ್ಧವಾಗಿ ನಡೆಸುವ ಬಗ್ಗೆ ಸೂಚನೆಗಳನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಾಇ 64 ಇಟಿಎಂ 2006(1) ದಿನಾಂಕ: 2–8–2007.

2. ಸರ್ಕಾರದ ಆದೇಶ ಸಂಖ್ಯೆ: ಕಾಇ 64 ಇಟಿಎಂ 2006(2) ದಿನಾಂಕ: 2–8–2007.

3. ಉದ್ಯೋಗ ಮತ್ತು ತರಬೇತಿ ಇಲಾಖೆ ಆಯುಕ್ತರ ಪತ್ರ ಸಂಖ್ಯೆ: ಉತಇ/ತ/ಆಆಶಾ/ವಿವ–41/ 2007–08, ದಿನಾಂಕ: 14–8–2007.

**ಪ್ರಸ್ತಾವನೆ :**

ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ನಡೆಸಲಾಗುತ್ತಿರುವ ಅಖಿಲ ಭಾರತ ವೃತ್ತಿ ಪರೀಕ್ಷೆ/ಶಿಶಿಕ್ಷು ತರಬೇತಿ ಪರೀಕ್ಷೆ/ಉನ್ನತೀಕರಣ ಪರೀಕ್ಷೆಗಳನ್ನು ನಡೆಸಲು, ನಿಯಂತ್ರಿಸಲು ಹಾಗೂ ಉಸ್ತುವಾರಿ ವಹಿಸುವಂತೆ ಅನುವಾಗಲು, ಪರೀಕ್ಷೆಗಳಿಗೆ ಸಿಬ್ಬಂದಿಯನ್ನು ನೇಮಿಸುವುದು ಹಾಗೂ ಪರೀಕ್ಷೆಗಳನ್ನು ನಡೆಸುವ ಸಂಬಂಧ ಎಲ್ಲಾ ಕ್ರಮಗಳನ್ನು ಕೈಗೊಳ್ಳುವ ಜವಾಬ್ದಾರಿಯನ್ನು ಜಿಲ್ಲಾಧಿಕಾರಿಗಳಿಗೆ ವಹಿಸಲು ಆದೇಶಿಸಲಾಗಿತ್ತು.

ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ನಡೆಸಲಾಗುತ್ತಿರುವ ಅಖಿಲ ಭಾರತ ವೃತ್ತಿ ಪರೀಕ್ಷೆ/ಶಿಶಿಕ್ಷು ತರಬೇತಿ ಪರೀಕ್ಷೆ/ ಉನ್ನತೀಕರಣ ಪರೀಕ್ಷೆಗಳನ್ನು ಸುಸೂತ್ರವಾಗಿ ನಡೆಸುವಂತೆ ಅನುವಾಗಲು ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಯುಕ್ತರ ಅಧ್ಯಕ್ಷತೆಯಲ್ಲಿ ಆರು ಮಂದಿ ಸದಸ್ಯರ ಸಮಿತಿಯೊಂದನ್ನು ರಚಿಸಲಾಗಿತ್ತು. ಅಲ್ಲದೆ ಪರೀಕ್ಷಾ ಕಾರ್ಯಕ್ರಮವನ್ನು ಹಂತಹಂತವಾಗಿ ನಡೆಸಲು ಅನುವಾಗಲು ವಿವರವಾದ ಮಾರ್ಗದರ್ಶನವನ್ನು ನಿರೂಪಿಸಿ ಸರ್ಕಾರಕ್ಕೆ ಒಪ್ಪಿಸುವಂತೆ ಸೂಚಿಸಲಾಗಿತ್ತು. ದಿನಾಂಕ: 10–8–2007ರಂದು ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಯುಕ್ತರ ಅಧ್ಯಕ್ಷತೆಯಲ್ಲಿ ಏರ್ಪಡಿಸಲಾದ ಸಮಿತಿಯ ಸಭೆಯಲ್ಲಿ ಕೂಲಂಕಷವಾಗಿ ಚರ್ಚಿಸಿದ ನಂತರ ಉದ್ಯೋಗ ಮತ್ತು ತರಬೇತಿ ಇಲಾಖೆಯಿಂದ ನಡೆಸುವ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ವಿವಿಧ ಅಧಿಕಾರಿ/ ಸಿಬ್ಬಂದಿಯು ಪರೀಕ್ಷೆಯನ್ನು ಕ್ರಮಬದ್ಧವಾಗಿ ನಡೆಸುವ ಸಲುವಾಗಿ ಅನುಸರಿಸಬೇಕಾದ ಕ್ರಮಗಳು ಹಾಗೂ ಜವಾಬ್ದಾರಿಗಳ ಬಗ್ಗೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಯುಕ್ತರು ಸರ್ಕಾರಕ್ಕೆ ವರದಿ ನೀಡಿರುತ್ತದೆ.

ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಜಿಲ್ಲಾಧಿಕಾರಿಗಳ ಕರ್ತವ್ಯ ಮತ್ತು ಜವಾಬ್ದಾರಿಗಳ ಬಗ್ಗೆ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 64 ಇಟಿಎಂ 2006, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ವತಿಯಿಂದ ನಡೆಸಲಾಗುವ ಎಲ್ಲಾ ಪರೀಕ್ಷೆಗಳ ಸಂಬಂಧದಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳು ನಿರ್ವಹಿಸಬೇಕಾದ ಕರ್ತವ್ಯ ಹಾಗೂ ಜವಾಬ್ದಾರಿಗಳನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಿಗದಿಪಡಿಸಲಾಗಿದೆ.

ಮೇಲ್ಕಂಡ ಸೂಚನೆಗಳನ್ನು ಕಡ್ಡಾಯವಾಗಿ ಪಾಲಿಸುವಂತೆ ಸಂಬಂಧಪಟ್ಟ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಈ ಮೂಲಕ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ದುಲ್ ರೆಹಮಾನ್**

ಪೀಠಾಧಿಕಾರಿ

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ಸರ್ಕಾರಿ ಆದೇಶ ಸಂಖ್ಯೆ: ಕಾಇ 64 ಇಟಿಎಂ 2006 ದಿನಾಂಕ 5–10–2007ಕ್ಕೆ ಅನುಬಂಧ.**

**ಜಿಲ್ಲಾಧಿಕಾರಿಗಳು ಅನುಸರಿಸಬೇಕಾದ ಕ್ರಮಗಳು ಹಾಗೂ ಜವಾಬ್ದಾರಿಗಳು.**

1. ಜಂಟಿ ನಿರ್ದೇಶಕರು (ಪರೀಕ್ಷೆ) ಮತ್ತು ನಿಯಂತ್ರಕರು, ರಾಜ್ಯ ಪರೀಕ್ಷಾ ಮಂಡಳಿ, ಉದ್ಯೋಗ ಮತ್ತು ತರಬೇತಿ ಇಲಾಖೆ ಬೆಂಗಳೂರು ರವರಿಂದ ಅಧಿಸೂಚಿಸಿರುವ ಪರೀಕ್ಷಾ ಕೇಂದ್ರಗಳ ಸಂಖ್ಯೆ, ಪ್ರತಿಯೊಂದು ಪರೀಕ್ಷಾ ಕೇಂದ್ರಗಳಿಗೆ ನಿಗಧಿಪಡಿಸಿರುವ ಅಭ್ಯರ್ಥಿಗಳ ಸಂಖ್ಯೆಗಳ ಬಗ್ಗೆ ಖಚಿತಪಡಿಸಿಕೊಳ್ಳುವುದು.
2. ಆಯಾ ಜಿಲ್ಲೆಗಳಲ್ಲಿ ಪರೀಕ್ಷಾ ಕೇಂದ್ರಗಳ ಅಗತ್ಯಗಳನ್ನು ನೋಡಿಕೊಂಡು ಜಿಲ್ಲಾಧಿಕಾರಿಗಳು, ಅಧ್ಯಕ್ಷರ, ಸ್ಥಳೀಯ ಪರೀಕ್ಷಾ ಮಂಡಳಿ, ಕೇಂದ್ರ ಅಧೀಕ್ಷಕರು, ಇನ್‌ವಿಜಿಲೇಟರ್ಸ್, ಮಾರ್ಗ ಸೂಚಿಗಳ ಅವಶ್ಯಕತೆ ಇದ್ದಲ್ಲಿ ಯಾವುದೇ ಬದಲಾವಣೆಗಳನ್ನು ಮಾಡಿ ಸೂಕ್ತ ಸೂಚನೆಯನ್ನು ನೀಡುವುದು.
3. ಪರೀಕ್ಷೆಗಳನ್ನು ನಡೆಸಲು ಅವಶ್ಯವಿರುವ ಅಧ್ಯಕ್ಷರು, ಕೇಂದ್ರೀಯ ಅಧೀಕ್ಷಕರು, ಇನ್‌ವಿಜಿಲೇಟರ್ಸ್ ಇತ್ಯಾದಿಗಳನ್ನು ನೇಮಕಾತಿ ಮಾಡುವುದು. ಹಾಗೂ ಅವರುಗಳಿಗೆ ಪರೀಕ್ಷೆಗಳನ್ನು ನಡೆಸುವ ವಿಷಯದ ಬಗ್ಗೆ ಸೂಕ್ತ ತರಬೇತಿ/ ಮಾರ್ಗಸೂಚಿಗಳನ್ನು ನೀಡುವ ಬಗ್ಗೆ ವ್ಯವಸ್ಥೆಯನ್ನು ಮಾಡುವುದು.
4. ಕೇಂದ್ರ ಕಛೇರಿಯಿಂದ ಸ್ವೀಕರಿಸಿರುವ ಪ್ರಶ್ನೆ ಪತ್ರಿಕೆ ಹಾಗೂ ಉತ್ತರ ಪುಸ್ತಕಗಳನ್ನು ಖಜಾನೆಯಲ್ಲಿ ಭದ್ರವಾಗಿ ಇಡುವ ವ್ಯವಸ್ಥೆಯನ್ನು ಮಾಡುವುದು.
5. ಪರೀಕ್ಷೆಗಳನ್ನು ಪೊಲೀಸ್‌ರವರ ಸಹಾಯದಿಂದ ಕಟ್ಟುನಿಟ್ಟಾಗಿ ಯಾವುದೇ ರೀತಿಯ ಅಕ್ರಮ / ಅವ್ಯವಹಾರ/ ದೂರುಗಳು ಬಾರದಂತೆ ನಡೆಸುವುದು.
6. ಪರೀಕ್ಷಾ ವಿಷಯದ ಪ್ರಶ್ನೆ ಪತ್ರಿಕೆ/ ಉತ್ತರ ಪತ್ರಿಕೆಗಳನ್ನು ಸಂಬಂಧಪಟ್ಟ ಪರೀಕ್ಷಾ ಕೇಂದ್ರಗಳಿಗೆ ತಲುಪಿಸುವ, ಪರೀಕ್ಷಾ ನಂತರ ಪರೀಕ್ಷಾ ಕೇಂದ್ರಗಳಿಂದ ಸ್ವೀಕರಿಸಿ, ಅದನ್ನು ಖಜಾನೆ/ ಉಪ ಖಜಾನೆಯಲ್ಲಿ ಸಂರಕ್ಷಿಸಿಡಲು ವ್ಯವಸ್ಥೆ ಮಾಡುವುದು.
7. ಎಲ್ಲಾ ವಿಷಯಗಳ ಪರೀಕ್ಷೆಗಳು ಮುಗಿದು ನಂತರ ಜಿಲ್ಲಾ ಖಜಾನೆ/ ಉಪ ಖಜಾನೆಯಿಂದ ಉತ್ತರ ಪತ್ರಿಕೆಗಳನ್ನು ಮತ್ತು ಇತರ ರಹಸ್ಯ ಪ್ಯಾಕೇಟ್‌ಗಳನ್ನು ಕೇಂದ್ರ ಕಛೇರಿಯ ಜಂಟಿ ನಿರ್ದೇಶಕರು (ಪರೀಕ್ಷೆ) / ನಿಯಂತ್ರಕರು, ರಾಜ್ಯ ಪರೀಕ್ಷಾ ಮಂಡಳಿರವರಿಗೆ ತಲುಪಿಸುವ ಬಗ್ಗೆ ವ್ಯವಸ್ಥೆ ಮಾಡುವುದು.
8. ಪರೀಕ್ಷಾ ಕೇಂದ್ರಗಳನ್ನು ಮಂಜೂರು ಮಾಡುವುದು, ಪರೀಕ್ಷಾ ಕೇಂದ್ರಗಳನ್ನು ರದ್ದು ಮಾಡುವುದು, ಪರೀಕ್ಷಾ ಕೇಂದ್ರಗಳನ್ನು ಬದಲಾವಣೆ ಮಾಡುವುದು.
9. ಪ್ರಶ್ನೆ ಪತ್ರಿಕೆಗಳು/ ಉತ್ತರಗಳು ಪೂರ್ಣವಾಗಲಿ ಅಥವಾ ಬಾಗಶಃವಾಗಲಿ ಪರೀಕ್ಷೆಗಳು ಪ್ರಾರಂಭವಾಗುವ ಮುನ್ನವೇ ಬಹಿರಂಗವಾದ್ದಲ್ಲಿ ಜಿಲ್ಲಾಧಿಕಾರಿಗಳು ಆ ಕೇಂದ್ರಗಳಲ್ಲಿ ತಕ್ಷಣ ಪರೀಕ್ಷೆಗಳನ್ನು ಮುಂದೂಡಿ ಮರು ಪರೀಕ್ಷೆಗೆ ಆದೇಶವನ್ನು ಹೊರಡಿಸುವುದು ಹಾಗೂ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲಿಸುವುದು. ತಕ್ಷಣ ಈ ಬಗ್ಗೆ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆರವರಿಗೆ ವರದಿಯನ್ನು ಕಳುಹಿಸಿಕೊಡುವುದು.
10. ಪರೀಕ್ಷೆಗಳಲ್ಲಿ ಅಕ್ರಮ/ ಅವ್ಯವಹಾರಗಳಲ್ಲಿ ಇಲಾಖೆಯ ಅಧಿಕಾರಿಗಳು/ ಸಿಬ್ಬಂದಿಗಳು ಭಾಗಿಯಾಗಿರುವುದು ಕಂಡು ಬಂದಲ್ಲಿ ಅವರುಗಳ ವಿರುದ್ದವೂ ಸಹ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲಿಸುವುದು.

**ಅಬ್ದುಲ್ ರೆಹಮಾನ್**

ಪಿ.ಆರ್.1817

ಪೀಠಾಧಿಕಾರಿ

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ಶಿಕ್ಷಣ ಸಚಿವಾಲಯ**

**ಸಂಖ್ಯೆ: ಇಡಿ 173 ಇಟಿಆರ್ 2007, ಬೆಂಗಳೂರು, ದಿನಾಂಕ: 31–10–2007.**

**ಸುತ್ತೋಲೆ**

ವಿಷಯ : ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ –2007 ಹಾಗೂ ಕರ್ನಾಟಕ ಸಿವಿಲ್ ಸೇವಾ (ಶಿಕ್ಷಕರ ವರ್ಗಾವಣೆ ನಿಯಂತ್ರಣ), ನಿಯಮಾವಳಿಗಳು –2007 ನೇರ

ನೇಮಕಾತಿಯಿಂದ ಮತ್ತು ಬಡ್ತಿ ಮೂಲಕ ನೇಮಕವಾಗುವ ಹಾಗೂ ವರ್ಗಾವಣೆಯಾಗುವ ಸರ್ಕಾರಿ ಪ್ರಾಥಮಿಕ, ಪ್ರೌಢ ಶಾಲಾ ಸಹ ಶಿಕ್ಷಕರು, ಮುಖ್ಯೋಪಾಧ್ಯಾಯರು ಹಾಗೂ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರ ಬಡ್ತಿ ಹಾಗೂ ವರ್ಗಾವಣೆ ಸಂಬಂಧ ಮಾರ್ಗಸೂಚಿಗಳು.

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 1 ಶಾಸನ 2007ರಲ್ಲಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ –2007 ಜಾರಿಗೆ ಬಂದಿದ್ದು, ಕರ್ನಾಟಕ ರಾಜ್ಯಪತ್ರದಲ್ಲಿ ದಿ: 1–9–2007ರಂದು ಪ್ರಕಟ ಪಡಿಸಲಾಗಿದೆ ಹಾಗೂ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು 2007ನ್ನು ದಿ: 16–20–2007ರಂದು ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ.

ಅದರ ಮುಖ್ಯಾಂಶಗಳು ಕೆಳಗಿನಂತಿವೆ.

i) ಈ ಅಧಿನಿಯಮವು ಹೊಸದಾಗಿ ನೇರ ನೇಮಕಾತಿ, ಬಡ್ತಿ ಅಥವಾ ವಿಲೀನಗೊಳಿಸುವ ಮೂಲಕ ನೇಮಕವಾಗುವ ಹಾಗೂ ವರ್ಗಾವಣೆ ಆಗುವ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು, ಮುಖ್ಯೋಪಾಧ್ಯಾಯರು, ಪ್ರೌಢ ಶಾಲಾ ಶಿಕ್ಷಕರು, ಮುಖ್ಯೋಪಾಧ್ಯಾಯರು ಹಾಗೂ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರುಗಳ ವೃಂದಗಳಿಗೆ ಸೇರಿದವರಿಗೆ ಸದರಿ ಅಧಿನಿಯಮ ಅನ್ವಯವಾಗುತ್ತದೆ.

ii) **ನೇರ ನೇಮಕಾತಿ ಮತ್ತು ಬಡ್ತಿ:** ಈ ಅಧಿನಿಯಮದ ಪ್ರಕಾರ ಪ್ರತಿಯೊಂದು ನೇಮಕಾತಿ ಪ್ರಾಧಿಕಾರವು ಶಾಲೆಗಳಲ್ಲಿ ಶಿಕ್ಷಕರ ಅಥವಾ ಪದವಿ ಪೂರ್ವ ಕಾಲೇಜುಗಳಲ್ಲಿ ಉಪನ್ಯಾಸಕರ ಪ್ರಾರಂಭಿಕ ನೇಮಕ ಮಾಡುವಾಗ ಮೊದಲಿಗೆ ಸಿ–ವಲಯದಲ್ಲಿನ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವಂತೆ ಖಚಿತಪಡಿಸಿಕೊಳ್ಳತಕ್ಕದ್ದು.

ಪರಂತು, ಗ್ರಾಮೀಣ ಪ್ರದೇಶಗಳಿಗೆ ಶಿಕ್ಷಕರ ಕಡ್ಡಾಯ ನೇಮಕಾತಿಗೆ ಸಂಬಂಧಿಸಿದ ಉಪಬಂಧಗಳು ಯಾವುದೇ ಗ್ರಾಮೀಣ ಪ್ರದೇಶವನ್ನೂ ಒಳಗೊಳ್ಳದ ಜೇಷ್ಠತಾ ಘಟಕಕ್ಕೆ ನೇಮಕಗೊಂಡ ಶಿಕ್ಷಕರಿಗೆ ಅನ್ವಯವಾಗತಕ್ಕದ್ದಲ್ಲ. (2) ಯಾವುದೇ ಒಂದು ನಿರ್ದಿಷ್ಟ ವಲಯದಲ್ಲಿ ಪ್ರಾರಂಭಿಕ ನೇಮಕ ಅಥವಾ ವರ್ಗಾವಣೆಗೆ ಯಾವುದೇ ಖಾಲಿ ಹುದ್ದೆ ದೊರೆಯದಿದ್ದರೆ, ಕನಿಷ್ಠ ಸಂಖ್ಯೆಯ ಸೇವಾ ವರ್ಷಗಳನ್ನು ಪೂರ್ಣಗೊಳಿಸಿದ ಒಬ್ಬ ಶಿಕ್ಷಕರನ್ನು, ಮತ್ತೊಂದು ವಲಯಕ್ಕೆ ಆದ್ಯತೆಯ ಕ್ರಮದಲ್ಲಿ ಸಿ–ವಲಯದಿಂದ ಬಿ–ವಲಯಕ್ಕೆ, ಬಿ–ವಲಯದಿಂದ ಎ–ವಲಯಕ್ಕೆ ಅಥವಾ ಎ–ವಲಯದಿಂದ ಅದೇ ಜೇಷ್ಠತಾ ಘಟಕದೊಳಗಿನ ನಗರ ಪ್ರದೇಶಕ್ಕೆ ವರ್ಗಾವಣೆ ಮಾಡುವ ಮೂಲಕ ಖಾಲಿ ಹುದ್ದೆಯನ್ನು ಸೃಜಿಸಬಹುದು;

ಪರಂತು ಸಿ–ವಲಯದಲ್ಲಿ ಸೇವೆ ಸಲ್ಲಿಸುತ್ತಿರುವ ಯಾವೊಬ್ಬ ಶಿಕ್ಷಕನು ಬಿ–ವಲಯಕ್ಕೆ ವರ್ಗಾವಣೆಯಾಗಲು ಅರ್ಹನಾಗಿದ್ದು ಅದೇ ರೀತಿಯಾಗಿ ಬಿ–ವಲಯದಲ್ಲಿ ಸೇವೆ ಸಲ್ಲಿಸುತ್ತಿರುವ ಒಬ್ಬ ಶಿಕ್ಷಕನು ಎ–ವಲಯಕ್ಕೆ ವರ್ಗಾವಣೆಯಾಗಲು ಅರ್ಹನಾಗಿದ್ದು, ಅವನು ಸಂದರ್ಭಾನುಸಾರ ಸಿ–ವಲಯದಲ್ಲೇ ಅಥವಾ ಬಿ–ವಲಯದಲ್ಲೇ ಸೇವೆ ಸಲ್ಲಿಸುವುದನ್ನು ಮುಂದುವರೆಸಲು ಇಚ್ಛಿಸಿದರೆ, ಅವನು ಅಯಾ ವಲಯದಲ್ಲಿಯೇ ಸೇವೆ ಸಲ್ಲಿಸುವುದನ್ನು ಮುಂದುವರೆಸಲು ಅನುಮತಿ ನೀಡಬಹುದು.

iii) **ವರ್ಗಾವಣೆ–** ಶಿಕ್ಷಕರ ವರ್ಗಾವಣೆಯನ್ನು ನಿಯಮಿಸಬಹುದಾದಂಥ ವಿಧಾನದಲ್ಲಿ ನಡೆಸುವ ಗಣಕೀಕೃತ ಕೌನ್ಸಿಲಿಂಗ್ ಮೂಲಕ ಮಾತ್ರ ಮಾಡತಕ್ಕದ್ದು. ಈ ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು 2007ರ ನಿಯಮ 3, 4, 5, 6, 7 ಮತ್ತು 8ರಲ್ಲಿ ನೀಡಲಾದ ಸೂಚನೆಯನ್ವಯ ಮಾಡತಕ್ಕದ್ದು.

iv) **ಘಟಕದೊಳಗೆ ಸಾರ್ವಜನಿಕ ಹಿತಾಸಕ್ತಿಯ ವರ್ಗಾವಣೆ:** ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ –2007ರ 5ನೇ ಪ್ರಕರಣದಂತೆ, ಅಂದರೆ, ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಸೇವೆಯಲ್ಲಿರುವ ಮತ್ತು ಒಂದು ವಲಯದಲ್ಲಿನ ಯಾವುದೇ ಶಾಲೆಯಲ್ಲಿ ನಿರಂತರವಾಗಿ ಹತ್ತು ವರ್ಷಗಳಿಗಿಂತ ಕಡಿಮೆಯಲ್ಲದ ಸೇವೆಯನ್ನು ಸಲ್ಲಿಸಿರುವ ಒಬ್ಬ ಶಿಕ್ಷಕನನ್ನು ಆ ಶಾಲೆಯಲ್ಲಿ ಸಲ್ಲಿಸಿರುವ ಶೇಕಡಾ ಸೇವಾ ಅವಧಿಯ ಆಧಾರದ ಮೇಲೆ ಅದೇ ಜೇಷ್ಠತಾ ಘಟಕದೊಳಗೆ ಅದೇ ವಲಯದ ಇನ್ನೊಂದು ಶಾಲೆಗೆ ವರ್ಗಾಯಿಸತಕ್ಕದ್ದು. ಒಂದು ಜೇಷ್ಠತಾ ಘಟಕದಲ್ಲಿ ಅಂಥ ವರ್ಗಾವಣೆಗಳ ಒಟ್ಟು ಸಂಖ್ಯೆಯು ಆ ಜೇಷ್ಠತಾ ಘಟಕದ ಕೇಡರ್‌ನಲ್ಲಿ ಮಂಜೂರಾದ ಶಿಕ್ಷಕರ ಹುದ್ದೆಗಳ ಒಟ್ಟು ಸಂಖ್ಯೆ ಶೇಕಡಾ 5ರಷ್ಟನ್ನು ಮೀರತಕ್ಕದ್ದಲ್ಲ.

v) **ಅಂತರ ಘಟಕ ವರ್ಗಾವಣೆ:** ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ –2007ರ 6ನೇ ಪ್ರಕರಣದಂತೆ ಮತ್ತು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು 2007ರಲ್ಲಿನ 18ನೇ ನಿಯಮಗಳಂತೆ ಕೌನ್ಸಿಲಿಂಗ್ ಮೂಲಕ ಕೈಗೊಳ್ಳತಕ್ಕದ್ದು.

vi) **ಪರಸ್ಪರ ವರ್ಗಾವಣೆಗಳು :** ಪರಸ್ಪರ ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು 2007ರ ನಿಯಮ 10ರಂತೆ ಕ್ರಮವನ್ನು ಅನುಸರಿಸುವುದು. ಈ ನಿಯಮಗಳ ನಿಯಮ 8(13) ರಂತೆ ಪರಸ್ಪರ ವರ್ಗಾವಣೆಗಳ ಸಂಖ್ಯೆಯನ್ನು ಹೊರತುಪಡಿಸಿ ಒಟ್ಟು ಕೋರಿಕೆ ಮೇರೆಗಿನ ಮತ್ತು ಸಾರ್ವಜನಿಕ ಹಿತಾಸಕ್ತಿಯ ವರ್ಗಾವಣೆಗಳ ಸಂಖ್ಯೆ ಶೇ 5 ಮತ್ತು ಅಂತರ ಘಟಕ ವರ್ಗಾವಣೆಗಳ ಸಂಖ್ಯೆ ಶೇ 1ನ್ನು ಮೀರಬಾರದು.

vii) **ದೂರುಗಳ ಆಧಾರದ ಮೇಲೆ ವರ್ಗಾವಣೆಗಳು :** ದೂರಿನ ಆಧಾರದ ಮೇಲಿನ ವರ್ಗಾವಣೆಗಳ ಪ್ರಕರಣಗಳಲ್ಲಿ ಸರ್ಕಾರದ ಆದೇಶ ಸಂ ಡಿಪಿಎಆರ್ 4 ಎಸ್‌ಟಿಆರ್ 2001, ದಿ: 22–11–2001ರ 7(ಎಫ್) ಪ್ಯಾರಾದ ಸೂಚನೆಗಳನ್ನು ಅನುಸರಿಸತಕ್ಕದ್ದು.

viii) **ಕೋರಿಕೆ ವರ್ಗಾವಣೆಗಳ ಆದ್ಯತಾ ಪಟ್ಟಿಯ ಸಿದ್ಧತೆ :** ವರ್ಗಾವಣೆ ಕೋರಿ ಬಂದ ಅರ್ಜಿಗಳನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು 2007ರ ನಿಯಮ 6ರಂತೆ ಪರಿಶೀಲಿಸಿ ಮತ್ತು ನಿಯಮ 7ರಂತೆ ಆದ್ಯತಾ ಪಟ್ಟಿಯನ್ನು ಸಿದ್ದಪಡಿಸುವುದು.

ix) **ಸಕ್ಷಮ ಪ್ರಾಧಿಕಾರ :** ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು 2007ರ ನಿಯಮ 3ರಲ್ಲಿ ನಿರ್ದಿಷ್ಟಪಡಿಸಿದ ಅಧಿಕಾರಿಗಳು ಶಿಕ್ಷಕರ/ಉಪನ್ಯಾಸಕರ ವರ್ಗಾವಣೆಗೆ ಸಕ್ಷಮ ಪ್ರಾಧಿಕಾರಿಗಳಾಗಿರುತ್ತಾರೆ.

x) **ಅಧಿಕಾರಿಗಳ ಹೊಣೆಗಾರಿಕೆ :** ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು 2007 ಅನ್ನು ಉಲ್ಲಂಘಿಸುವ ಸಕ್ಷಮ ಪ್ರಾಧಿಕಾರಗಳಿಗೆ ನಿಯಮ 17ರ ಪ್ರಕಾರ ದಂಡನೆ ವಿಧಿಸಲು ಆಸ್ಪದ ಕಲ್ಪಿಸಲಾಗಿದೆ.

xi) **ಇಲಾಖಾ ಮುಖ್ಯಸ್ಥರ ಅಧಿಕಾರಗಳು :** ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು 2007ರ ನಿಯಮ 18ರ ಪ್ರಕಾರ, ಈ ಕೆಳಕಂಡ ಸಂದರ್ಭಗಳಲ್ಲಿ ಮಾತ್ರ ಶೈಕ್ಷಣಿಕ ವರ್ಷದ ಅವಧಿಯಲ್ಲಿ ಶಿಕ್ಷಕರ ವರ್ಗಾವಣೆಯನ್ನು ಮಾಡಲು ಇಲಾಖಾ ಮುಖ್ಯಸ್ಥರಿಗೆ ಅಧಿಕಾರ ನೀಡಲಾಗಿದೆ, ಎಂದರೆ,

1. ಅಮಾನತ್ತಿನ ಬದಲಾಗಿ ಶಿಸ್ತಿನ ಕ್ರಮ ತೆಗೆದುಕೊಳ್ಳುವ ಸಂದರ್ಭದಲ್ಲಿ;
2. ಬಡ್ತಿಯ ಪರಿಣಾಮವಾಗಿ ಉಂಟಾಗುವ ಸಂದರ್ಭದಲ್ಲಿ;
3. ಹೆಚ್ಚುವರಿ ಹುದ್ದೆಗಳು ಮತ್ತು ಶಿಕ್ಷಕರು ಇದ್ದಲ್ಲಿ ಅವುಗಳ/ಅವರ ಮರು ನಿಯೋಜನೆಯ ಪರಿಣಾಮವಾಗಿ ಉಂಟಾಗುವ ಸಂದರ್ಭದಲ್ಲಿ.

2. 2001ನೇ ಸಾಲಿನ ಪೂರ್ವದಲ್ಲಿ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಸಂಬಂಧಿಸಿದಂತೆ ಆದ ನೇಮಕಾತಿಗಳು ಜಿಲ್ಲಾ ಮಟ್ಟದ ನೇಮಕಾತಿಗಳಾಗಿದೆ ಎಂಬುದನ್ನು ಗಮನದಲ್ಲಿಟ್ಟುಕೊಂಡು ಅಂತಹವರಿಗೆ ಸಂಬಂಧಿಸಿದಂತೆ ಜಿಲ್ಲೆಯನ್ನು ಜೇಷ್ಠತಾ ಘಟಕವೆಂದು ಪರಿಗಣಿಸುವುದು. 2001ರ ನಂತರ ನೇಮಕವಾದವರಿಗೆ ಕ್ಷೇತ್ರವನ್ನು ಜೇಷ್ಠತಾ ಘಟಕವೆಂದು ಪರಿಗಣಿಸುವುದು.

3. ಇನ್ನು ಮುಂದೆ ಶಿಕ್ಷಕರ ಸಾರ್ವತ್ರಿಕ ವರ್ಗಾವಣೆಯನ್ನು ಮೇಲ್ಕಂಡ ಅಧಿನಿಯಮ ಹಾಗೂ ನಿಯಮಾವಳಿಯಲ್ಲಿ ಹೇಳಲಾಗಿರುವ ಸೂಚನೆಗಳನ್ನು ಅನ್ವಯಿಸಿ ಗಣಕೀಕೃತ ಕೌನ್ಸಿಲಿಂಗ್ ಮೂಲಕ ಮಾತ್ರ ಮಾಡಲು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು 2007ರ ನಿಯಮ 4ರಂತೆ ಒಂದು ವೇಳಾಪಟ್ಟಿಯನ್ನು ಗೊತ್ತುಪಡಿಸಿಕೊಂಡು ನಿಯಮ 8ರಲ್ಲಿನ ಸೂಚನೆಗಳನ್ನು ಪಾಲಿಸಿ, ಕಟ್ಟುನಿಟ್ಟಾಗಿ ಮುಂದಿನ ಕ್ರಮ ಜರುಗಿಸತಕ್ಕದ್ದು.

**ಬಿ.ಹೆಚ್. ಪಡಸಲಗಿ**

ಪಿ.ಆರ್.1971 ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೆ: ಸತೀಶ್ ಶುಗರ್ಸ್ (ಲಿ.,) ಹುಣಶ್ಯಾಳ್ ಪಿ.ಜಿ. ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 07 ದಿ: 11–9–2007.

2. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/58/2004–05, ದಿನಾಂಕ: 5–9–2007.

**ಪ್ರಸ್ತಾವನೆ :**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಮೆ.ಸತೀಶ್ ಶುಗರ್ಸ್ (ಲಿ), ಹುಣಶ್ಯಾಳ್ ಪಿಜಿ, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 310 ಎಸ್‌ಜಿಎಫ್ 2007, ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2007.**

ಮೆ. ಸತೀಶ್ ಶುಗರ್ಸ್ (ಲಿ), ಹುಣಶ್ಯಾಳ್ ಪಿಜಿ, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕಾರ್ಖಾನೆಗೆ ಈಗಾಗಲೇ ಹಂಚಿಕೆಯಾಗಿರುವ ಕಬ್ಬಿನ ಮೀಸಲು ಪ್ರದೇಶಗಳಿಂದಲೇ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಪಡೆಯಬೇಕು ಹಾಗೂ ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಷರತ್ತನ್ನು ವಿಧಿಸಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1816

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಟಿ. ಮಲ್ಲಪ್ಪ, ಕೆ.ಎ.ಎಸ್. (ಕಿ.ಶ್ರೇ) ಅಧಿಕಾರಿ ಶ್ರೀ ಸಿ.ಎನ್. ಕುಪ್ಪುಸ್ವಾಮಿ, ಉಪ ಮುಖ್ಯ ಇಂಜಿನಿಯರ್, ಶ್ರೀ ಬಿ.ಎಸ್. ಮುರಳಿ, ಸಹಾಯಕ ಕಾರ್ಯಪಾಲಕ ಅಭಿಯಂತರರು, ಶ್ರೀ ಪರಸಪ್ಪ ಮಹೇಂದ್ರಕರ್, ನಿವೃತ್ತ ಕಿರಿಯ ಅಭಿಯಂತರರು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿಯವರ ನೇಮಕ –ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 64 ಎಸ್‌ಇಎನ್ 2004, ದಿನಾಂಕ: 8–12–2005.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 64 ಎಸ್‌ಇಎನ್ 2004, ದಿನಾಂಕ: 13–6–2007.
3. ಶ್ರೀ ಸೈಯದ್ ನಿಸಾರ್ ಅಹಮ್ಮದ್ ಮತ್ತು ಶ್ರೀ ಪಿ. ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರುಗಳು ಇವರ ಪತ್ರ ದಿನಾಂಕ: 22–3–2007 ಮತ್ತು 11–7–2007.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಶ್ರೀ ಟಿ. ಮಲ್ಲಪ್ಪ, ಕೆ.ಎ.ಎಸ್. ಅಧಿಕಾರಿ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಕ್ರಮವಾಗಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರುಗಳಾದ ಶ್ರೀ ಸೈಯದ್ ನಿಸಾರ್ ಅಹಮ್ಮದ್ ಮತ್ತು ಪಿ. ಗೋಪಾಲಕೃಷ್ಣ ಅವರುಗಳನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ಮುಖ್ಯ ಅಭಿಯಂತರರು, ಮುಖ್ಯ ಅಭಿಯಂತರರವರ ಕಛೇರಿ ಹೇಮಾವತಿ ಜಲಾಶಯ ಯೋಜನೆ ಗೊರೂರು, ಹಾಸನ ಜಿಲ್ಲೆ ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿರುತ್ತದೆ. ಆದರೆ ವಿಚಾರಣಾಧಿಕಾರಿಗಳಾದ ಶ್ರೀ ಸೈಯದ್ ನಿಸಾರ್ ಅಹಮ್ಮದ್ ಮತ್ತು ಶ್ರೀ ಪಿ. ಗೋಪಾಲಕೃಷ್ಣ, ಅವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರಗಳಲ್ಲಿ ತಮ್ಮ ವೈಯಕ್ತಿಕ ಕಾರಣಗಳಿಂದಾಗಿ ಈ ವಿಚಾರಣೆಯನ್ನು ಮುಂದುವರಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ದಾಖಲೆಗಳನ್ನು ಹಿಂದಿರುಗಿಸಿರುತ್ತಾರೆ. ಸದರಿಯವರ ಕೋರಿಕೆಯನ್ನು ಪರಿಗಣಿಸಿದ ಸರ್ಕಾರವು ಈ ಪ್ರಕರಣದಲ್ಲಿ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 64 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ರೊಂದಿಗೆ ಓದಿಕೊಂಡಂತೆ ನಿಯಮ 11 (2)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಟಿ. ಮಲ್ಲಪ್ಪ, ಕೆ.ಎ.ಎಸ್. ಅಧಿಕಾರಿ, ಶ್ರೀ ಸಿ.ಎನ್. ಕುಪ್ಪುಸ್ವಾಮಿ, ಉಪ ಮುಖ್ಯ ಇಂಜಿನಿಯರ್, ಶ್ರೀ ಬಿ.ಎಸ್. ಮುರಳಿ, ಸಹಾಯಕ ಕಾರ್ಯಪಾಲಕ ಅಭಿಯಂತರರು, ಶ್ರೀ ಪರಸಪ್ಪ ಮಹೇಂದ್ರಕರ್, ನಿವೃತ್ತ ಕಿರಿಯ ಅಭಿಯಂತರರು ಅವರುಗಳ ಮೇಲೆ ಹೊರಿಸಲಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ದಿನಾಂಕ: 13–6–2007ರ ಸರ್ಕಾರಿ ಆದೇಶದಲ್ಲಿ ನೇಮಿಸಲಾದ ಶ್ರೀ ಪಿ. ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು,

ಬೆಂಗಳೂರು ಇವರ ಬದಲಿಗೆ ಪ್ರಾದೇಶಿಕ ಆಯುಕ್ತರು, ಮೈಸೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ. ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಉಪ ಮುಖ್ಯ ಅಭಿಯಂತರರು, ಮುಖ್ಯ ಅಭಿಯಂತರರವರ ಕಛೇರಿ, ಹೇಮಾವತಿ ಜಲಾಶಯ ಯೋಜನೆ, ಗೊರೂರು ಹಾಸನ ಜಿಲ್ಲೆ ಇವರೇ ಮಂಡನಾಧಿಕಾರಿಯಾಗಿ ಮುಂದುವರಿಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1706

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** 'ಆಸರೆ' ಎಂಬ ಹೊಸ ಯೋಜನೆಯನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಅನುಷ್ಠಾನಗೊಳಿಸಲು ಮಾರ್ಗಸೂಚಿಗಳನ್ನು ಹೊರಡಿಸುವ ಕುರಿತು.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಮಮಇ:45:ಮಅನಿ: 2006, ದಿ: 2–4–07.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ 2007–08ನೇ ಸಾಲಿನಿಂದ ಅಬಲೆ/ಅಸಹಾಯಕ ಮಹಿಳೆಯರ ಆರ್ಥಿಕ ಸಬಲೀಕರಣಕ್ಕಾಗಿ 'ಆಸರೆ' ಎಂಬ ಹೊಸ ಯೋಜನೆಯನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಅನುಷ್ಠಾನಗೊಳಿಸಲು ಮಂಜೂರಾತಿ ನೀಡಿ ಈ ಯೋಜನೆಯ ಅನುಷ್ಠಾನಕ್ಕಾಗಿ ಬೇಕಾಗಿರುವ ಅನುದಾನ ರೂ. 5.42 ಕೋಟಿಗಳನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಪಿ.ಡಿ. ಖಾತೆಯಲ್ಲಿರುವ ಷೇರು ಬಂಡವಾಳ ಹಣದಿಂದ ಹಿಂದಕ್ಕೆ ಪಡೆಯಲು ಸರ್ಕಾರದ ಅನುಮತಿ ಮತ್ತು ಅಧಿಕಾರವನ್ನು ನೀಡಲಾಗಿದೆ. ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮಾರ್ಗಸೂಚಿಗಳನ್ನು ಹೊರಡಿಸುವ ಅಗತ್ಯವಿದ್ದು, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಮಮಅ:45:ಮಅನಿ: 2006, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2007.**

ಸರ್ಕಾರದ ಆದೇಶ ಸಂಖ್ಯೆ: ಮಮಇ:45:ಮಅನಿ:2006, ದಿನಾಂಕ: 2–4–2007ರ ರೀತ್ಯಾ 2007–08ನೇ ಸಾಲಿನಿಂದ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ 'ಆಸರೆ' ಎಂಬ ಹೊಸ ಯೋಜನೆಯನ್ನು ಈ ಆದೇಶಕ್ಕೆ ಲಗತ್ತಿಸಿರುವ ಮಾರ್ಗಸೂಚಿಗಳಂತೆ ಅನುಷ್ಟಾನಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ: ಮಮಇ:45:ಮಅನಿ: 2006, ದಿನಾಂಕ: 2–4–07ನ್ನು ಭಾಗಶಃ ಮಾರ್ಪಡಿಸಿ, ಷೇರು ಬಂಡವಾಳ ಹಣವನ್ನು ಯಾವುದೇ ಸಹಾಯಧನಕ್ಕಾಗಿ ಉಪಯೋಗಿಸಬಾರದೆಂದು ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ: ಮಮಇ:45:ಮಅನಿ:2006, ದಿನಾಂಕ: 5–9–2007ಕ್ಕೆ**

**ಮಾರ್ಗಸೂಚಿಗಳು:–**

1. ಈ ಯೋಜನೆಯಲ್ಲಿ ಸೌಲಭ್ಯ ಪಡೆಯುವ ಮಹಿಳೆಯರು ಹೊಂದಿರಬೇಕಾದ ಅರ್ಹತೆಗಳು:
    1. ಈ ಯೋಜನೆಯಲ್ಲಿ ಮಹಿಳೆಯರಿಗೆ ಮಾತ್ರ ಅವಕಾಶವಿರುತ್ತದೆ.
    2. ಅರ್ಜಿದಾರರು ಕರ್ನಾಟಕ ರಾಜ್ಯದ ಖಾಯಂ ನಿವಾಸಿಯಾಗಿರಬೇಕು.
    3. ಸನ್ಮಾನ್ಯ ಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ ಹಾಗೂ ಇತರೆ ಇಲಾಖೆಗಳ ಮಾನ್ಯ ಸಚಿವರುಗಳು ನಡಸುವ ಜನತಾದರ್ಶನ ಕಾರ್ಯಕ್ರಮದಲ್ಲಿ ಹಾಗೂ ಮಾನ್ಯ ಶಾಸಕರು ಶಿಫಾರಸ್ಸು ನೀಡಿ ಗುರುತಿಸುವ ಮಹಿಳಾ ಫಲಾನುಭವಿಗಳಿಗೆ ಆಧ್ಯತೆ ಮೇರೆಗೆ ಆರ್ಥಿಕ ನೆರವನ್ನು (ಸಹಯಧನ+ಅಂಚಿನ ಹಣದ ಸಾಲ) ನಿಗಮದ ಕೇಂದ್ರ ಕಛೇರಿಯಿಂದ ಮಂಜೂರಾತಿ ನೀಡುವುದು.
    4. ವಿಧವೆಯರು, ಸಂಕಷ್ಟಕ್ಕೊಳಗಾದ ಮಹಿಳೆಯರು, ಅಂಗವಿಕಲ ಮಹಿಳೆಯರು, ಹಾಗೂ ದೇವದಾಸಿ ಮಹಿಳೆಯರಿಗೆ ಆದ್ಯತೆ ನೀಡಲಾಗುವುದು.
    5. ಅರ್ಜಿದಾರರು ಸೌಲಭ್ಯ ಪಡೆಯಲಿಚ್ಛಿಸುವ ಉದ್ಧೇಶ, ಕಸುಬುಗಳಲ್ಲಿ ಸಾಕಷ್ಟು ಜ್ಞಾನ ಮತ್ತು ಅನುಭವ ಹೊಂದಿದವರಾಗಿರಬೇಕು.

6. ಅರ್ಜಿದಾರರು 18 ವರ್ಷದಿಂದ 55 ವರ್ಷದ ವಯೋಮಾನದವರಾಗಿರಬೇಕು.
7. ಅರ್ಜಿದಾರರ ಕುಟುಂಬದ ವಾರ್ಷಿಕ ಆದಾಯ ರೂ. 40,000/–ಕ್ಕೆ ಮೀರಿರಬಾರದು.

**ಅನುಷ್ಠಾನ ಮಾಡುವ ವಿಧಾನ :**

ನಿಗಮದಲ್ಲಿ ಈ ಯೋಜನೆಯಡಿ ಲಭ್ಯವಾಗುವ ಹಣದ ಆಧಾರದ ಮೇಲೆ ಪ್ರತಿ ವರ್ಷ ಕ್ರಿಯಾ ಯೋಜನೆ ಸಿದ್ದಪಡಿಸಿ ಜಿಲ್ಲಾವಾರು ಗುರಿ ನಿಗಧಿಪಡಿಸಲಾಗುವುದು. ಈ ಯೋಜನೆಯಡಿ ಸಾಲ–ಸೌಲಭ್ಯ ಪಡೆಯಲು ನಿಗಮದಿಂದ ಅರ್ಜಿಗಳನ್ನು ಮುದ್ರಿಸಿ ಜಿಲ್ಲೆಗಳ ಉಪ ನಿರ್ದೇಶಕರು/ ಸಹಾಯಕ ನಿರ್ದೇಶಕರು, ಮಹಿಳಾ ಅಭಿವೃದ್ಧಿ ಇಲಾಖೆ ಹಾಗೂ ಪದನಿಮಿತ್ತ ಜಿಲ್ಲಾ ವ್ಯವಸ್ಥಾಪಕರು, ಕ.ರಾ.ಮ.ಅ. ನಿಗಮ ಇವರುಗಳಿಗೆ ಕಳುಹಿಸಲಾಗುವುದು.

**ಅರ್ಜಿಗಳನ್ನು ವಿತರಿಸುವ ಮತ್ತು ಸ್ವೀಕರಿಸುವ ವಿಧಾನ :**

1. ನಿಗಮದಿಂದ ವಾರ್ಷಿಕ ಗುರಿ ನಿಗದಿಪಡಿಸಿದ ನಂತರ, ಗುರಿಗನುಗುಣವಾಗಿ ಸ್ಥಳೀಯ ಪತ್ರಿಕೆಗಳಲ್ಲಿ ವ್ಯಾಪಕ ಜಾಹೀರಾತುಗಳನ್ನು ನೀಡುವ ಮೂಲಕ ಅರ್ಹರಿಂದ ಅರ್ಜಿಗಳನ್ನು ಆಹ್ವಾನಿಸಬೇಕು. ಅರ್ಜಿಯೊಂದಿಗೆ ಸಲ್ಲಿಸಬೇಕಾದ ದಾಖಲಾತಿಗಳನ್ನು ಹಾಗೂ ಅರ್ಜಿ ಸ್ವೀಕರಿಸುವ ಕಡೆಯ ದಿನಾಂಕವನ್ನು ಸ್ಪಷ್ಟವಾಗಿ ಪ್ರಕಟಣೆಯಲ್ಲಿ ತಿಳಿಸಿರತಕ್ಕದ್ದು.

2. ಅರ್ಜಿಗಳನ್ನು ಸ್ವೀಕರಿಸುವ ಬಗ್ಗೆ ಸ್ಥಳೀಯ ದಿನಪತ್ರಿಕೆಗಳಲ್ಲಿ ವ್ಯಾಪಕ ಪ್ರಚಾರ ನೀಡುವುದು ಮತ್ತು ಎಲ್ಲಾ ಗ್ರಾಮ ಮಟ್ಟದಿಂದಲೂ ಮಹಿಳೆಯರು ಅರ್ಜಿಗಳನ್ನು ಪಡೆಯುವ ಬಗ್ಗೆ ಕ್ರಮವಹಿಸುವುದು.

3. ಬಂದಂತಹ ಅರ್ಜಿಗಳನ್ನು ಅರ್ಜಿ ಸ್ವೀಕೃತಿ ವಹಿಯಲ್ಲಿ ಕಡ್ಡಾಯವಾಗಿ ರಿಜಿಸ್ಟರ್ ಸಿದ್ದಪಡಿಸಿ ನೋಂದಾಯಿಸಬೇಕು ಮತ್ತು ಬಂದಂತಹ ಅರ್ಜಿಗಳ ಬಗ್ಗೆ ಸ್ಥಳ ಪರಿಶೀಲನೆ ನಡೆಸುವುದು.

4. ಸ್ಥಳೀಯ ಸಂಪನ್ಮೂಲಗಳು, ಸಾಮರ್ಥ್ಯ ಹಾಗೂ ಜನರ ಕೌಶಲ್ಯವನ್ನು ಆಧರಿಸಿ ಲಾಭದಾಯಕವಾಗಿ ನಡೆಸಬಹುದಾದಂತಹ ಕಾರ್ಯಚಟುವಟಿಕೆಗಳನ್ನು ಗುರುತಿಸುವುದು.

5. ಸಾಧ್ಯವಾದಷ್ಟು ಮಾರುಕಟ್ಟೆ ವ್ಯವಸ್ಥೆ ಹೊಂದಿರುವ ಯೋಜನೆಯನ್ನು ಪುರಸ್ಕರಿಸಬೇಕು.

**ಅರ್ಜಿಯೊಂದಿಗೆ ಸಲ್ಲಿಸಬೇಕಾದ ಅಗತ್ಯ ದಾಖಲಾತಿಗಳು :**

1. ಜಾತಿ ಪ್ರಮಾಣ ಪತ್ರ.
2. ಕುಟುಂಬದ ವಾರ್ಷಿಕ ಆದಾಯ ಪತ್ರ
3. ಪಡಿತರ ಚೀಟಿ/ ಮತದಾರರ ಗುರುತಿನ ಚೀಟಿ.
4. ಯೋಜನಾ ವರದಿ.
5. ತರಬೇತಿ ಅಥವಾ ಅನುಭವದ ಪತ್ರ
6. ಭಾವಚಿತ್ರ

**ಫಲಾನುಭವಿಗಳ ಆಯ್ಕೆಗೆ ರಚಿಸಲಾದ ಜಿಲ್ಲಾ ಆಯ್ಕೆ ಸಮಿತಿಯ ಸದಸ್ಯರು :**

| | | |
|---|---|---|
| 1. | ಜಿಲ್ಲಾ ವ್ಯವಸ್ಥಾಕರು, ಕ.ರಾ.ಮ.ಅ. ನಿಗಮ ಹಾಗೂ ಉಪ ನಿರ್ದೇಶಕರು, ಮಮಅಇ | : ಅಧ್ಯಕ್ಷರು |
| 2. | ಜಿಲ್ಲಾ ಮಾರ್ಗದರ್ಶಿ, ಬ್ಯಾಂಕ್ ವ್ಯವಸ್ಥಾಪಕರು | : ಸದಸ್ಯರು |
| 3. | ಜಿಲ್ಲೆಯ ಎಲ್ಲಾ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು | : ಸದಸ್ಯರು |
| 4. | ಜಿಲ್ಲಾ ವ್ಯವಸ್ಥಾಪಕರು, ನಬಾರ್ಡ್ ಸಂಸ್ಥೆ | : ಸದಸ್ಯರು |
| 5. | ಅಭಿವೃದ್ಧಿ ನಿರೀಕ್ಷಕರು, ಕ.ರಾ.ಮ.ಅ. ನಿಗಮ | : ಸದಸ್ಯ ಕಾರ್ಯದರ್ಶಿಗಳು |

ಸೂಕ್ತ ದಾಖಲಾತಿಗಳೊಂದಿಗೆ ಪಡೆದ ಅರ್ಜಿಗಳನ್ನು ಜಿಲ್ಲಾ ಕಛೇರಿಯಿಂದ ಪ್ರಾಥಮಿಕ ಪರಿಶೀಲನೆ ಮಾಡಿ ನಂತರ ಸೂಕ್ತ ಅರ್ಜಿಗಳನ್ನು ಜಿಲ್ಲಾ ಆಯ್ಕೆ ಸಮಿತಿಯಲ್ಲಿ ಪರಿಶೀಲಿಸಿ ಆಯ್ಕೆಯಾದ ಅರ್ಜಿಗಳನ್ನು ಅರ್ಜಿದಾರರ ಸೇವಾ ವಲಯದಲ್ಲಿ ಬರುವ ಬ್ಯಾಂಕಿನ ಶಾಖೆಗಳಿಗೆ ಸಾಲ ಮಂಜೂರಾತಿಗಾಗಿ ಜಿಲ್ಲಾ ಕಛೇರಿಯಿಂದ ಶಿಫಾರಸ್ಸು ಮಾಡಲಾಗುವುದು.

ಅರ್ಜಿದಾರರು ಸಲ್ಲಿಸಿರುವ ಯೋಜನೆಯ ಆರ್ಥಿಕ ಸಮಂಜಸತೆ, ಲಾಭದಾಯಕತೆ, ಮಾರುಕಟ್ಟೆ ವ್ಯವಸ್ಥೆಯನ್ನು ಪರಾಮರ್ಶಿಸಿ ಬ್ಯಾಂಕಿನ ಅಧಿಕಾರಿಗಳು ಸಾಲವನ್ನು ಮಂಜೂರು ಮಾಡಲು ಒಪ್ಪಿದಲ್ಲಿ ಪ್ರವರ್ತಕರ ಪಾಲು, ಅಂಚಿನ ಹಣದ ಸಾಲ, ಬ್ಯಾಂಕಿನ ಸಾಲದ ಮೊತ್ತು ಹಾಗೂ ಒಟ್ಟು ಯೋಜನಾ ಮೊತ್ತ, ಚಟುವಟಿಕೆ ವಿವರ, ಸ್ಥಿರಾ ಹಾಗೂ ದುಡಿಮೆ ಬಂಡವಾಳಗಳ ವಿವರ, ಅಂಚಿನ ಹಣದ ಸಾಲ ಮರುಪಾವತಿ, ಬ್ಯಾಂಕಿನ ಸಾಲದ ಹಣದ ಮರುಪಾವತಿ ಅವಧಿ ಇತರೆ ವಿವರಗಳನ್ನು ಒಳಗೊಂಡ ಪೂರ್ಣ ಪ್ರಮಾಣದ ಮಂಜೂರಾತಿ ಪತ್ರವನ್ನು ನಿಗಮದ ಜಿಲ್ಲಾ ಕಛೇರಿಗೆ ಕಳುಹಿಸುವುದು. ಸದರಿ ಮಂಜೂರಾತಿ ಪತ್ರದಂತೆ ಜಿಲ್ಲಾ ಕಛೇರಿಯಲ್ಲಿ ಪರಿಶೀಲಿಸಿ ಸೂಕ್ತ ದಾಖಲಾತಿಗಳನ್ನು ಸಾಲ ಮಂಜೂರಾತಿ ಪಡೆದ ಫಲಾನುಭವಿಯಿಂದ ಪಡೆದು ಲಭ್ಯವಾಗುವ ಅಂಚಿನ ಹಣ ಸಾಲ ಹಾಗೂ ಸಹಾಯಧನ ಬಿಡುಗಡೆ ಸೂಕ್ತ ಪ್ರಸ್ತಾವನೆಯನ್ನು ನಿಗಮದ ಕೇಂದ್ರ ಕಛೇರಿಗೆ ಕಳುಹಿಸುವುದು.

**ನಿಗಮದಿಂದ ಅಂಚಿನ ಹಣ ಬಿಡುಗಡೆಗೆ ಕ್ರಮ :**

1. ಸಾಲ ಮಂಜೂರಾತಿ ಆದೇಶದಂತೆ ಅನ್ವಯಿಸುವ ಸಹಾಯಧನವನ್ನು ಹಾಗೂ ಅಂಚಿನ ಹಣವನ್ನು ಜಿಲ್ಲೆಯ ನಿಮಗದ ಕಛೇರಿಗಳಿಂದ ಹಾಗೂ ನಿಗಮದಿಂದ ಬಿಡುಗಡೆಗೊಳಿಸುವುದು, ಅಲ್ಲದೆ ಮಾನ್ಯ ಮುಖ್ಯ ಮಂತ್ರಿಗಳ ಜನತಾ ದರ್ಶನದಲ್ಲಿ ಶಿಫಾರಸ್ಸಾಗಿರುವ ಅರ್ಜಿದಾರರಿಗೆ ನೇರವಾಗಿ ನಿಗಮದ ಕೇಂದ್ರ ಕಛೇರಿಯಿಂದ ಸಹಾಯಧನ ಮತ್ತು ಮಾರ್ಜಿನ್ ಹಣವನ್ನು ಬಿಡುಗಡೆಗೊಳಿಸುವುದು.
2. ಸದರಿ ಜಿಲ್ಲಾ ಕಛೇರಿಯ ಶಿಫಾರಸ್ಸಿನ ಮೇರೆಗೆ ಲಭ್ಯವಾದ ಮಾರ್ಜಿನ್ ಹಣವನ್ನು ನಿಗಮದಿಂದ ಮಂಜೂರು ಮಾಡಿ ಫಲಾನುಭವಿಗಳಿಂದ ಸೂಕ್ತ ದಾಖಲಾತಿಗಳನ್ನು ಪಡೆದು ಪರಿಶೀಲಿಸಿದ ನಂತರ ಬಿಡುಗಡೆಗೊಳಿಸುವುದು.
3. ಬಿಡುಗಡೆಗೊಳಿಸುವ ಮಾರ್ಜಿನ್ ಹಣಕ್ಕೆ ಪೂರಕ ಭದ್ರತೆಯಾಗಿ ಮಾರ್ಜಿನ್ ಹಣದ ಮೊತ್ತದ ಚರ / ಸ್ಥಿರ ಆಸ್ತಿ ದಾಖಲಾತಿಗಳನ್ನು ಪಡೆಯುವುದು ಇದೇ ಅಲ್ಲದೆ, ಬಿಡುಗಡೆಗೊಳಿಸುವ ಸಾಲದ ಮೊತ್ತಕ್ಕೆ ಸಮಾನಾಗಿ ಬ್ಯಾಂಕಿನ Fixed Deposit ಪ್ರಮಾಣ ಪತ್ರಗಳನ್ನು ಪಡೆಯುವುದು. ಅಲ್ಲದೆ, ಸರ್ಕಾರಿ ಸೇವೆಯಲ್ಲಿರುವ ಅಥವಾ ಆದಾಯ ತೆರಿಗೆ ಪಾವತಿಸುವವರಿಂದ ಗ್ಯಾರಂಟಿಯನ್ನು ಪಡೆಯುವುದು.
4. ಕೇಂದ್ರ ಕಛೇರಿಯಿಂದ ಹಣ ಬಿಡುಗಡೆಯಾದ ನಂತರ, ಜಿಲ್ಲಾ ಕಛೇರಿಯಲ್ಲಿ ಫಲಾನುಭವಿಯಿಂದ ಪಡೆಯಬೇಕಾದ ಅಗ್ರಿಮೆಂಟ್, ಪ್ರೊಮೋಟ್, ಹಣಸಂದ ರಸೀದಿ, ಇತರೆ ಅಗತ್ಯ ದಾಖಲಾತಿಗಳನ್ನು ಪಡೆದು ಸಂಬಂಧಪಟ್ಟ ಬ್ಯಾಂಕಿಗೆ ಹಣ ಬಿಡುಗಡೆ ಮಾಡುವುದು ಹಾಗೂ ಸದರಿ ದಾಖಲಾತಿಗಳನ್ನು ನಿಗಮಕ್ಕೆ ಸಲ್ಲಿಸುವುದು.
5. ಸಾಲ ಮಂಜೂರಾತಿ ಆದೇಶದ ಮೇರೆಗೆ ಲಭ್ಯವಾಗಬಹುದಾದ ಮಾರ್ಜಿನ್ ಹಣಕ್ಕೆ ಶೇಕಡ 4ರ ಬಡ್ಡಿ ದರ ವಿಧಿಸಿ ನಂತರ ಕಾಲ ಕಾಲಕ್ಕೆ ಜಿಲ್ಲಾ ಕಛೇರಿಗಳಿಂದ ವಸೂಲಿ ಮಾಡಿ ನಿಗಮದ ಈ ಸಂಬಂಧ ಲೆಕ್ಕದ ಖಾತೆಗೆ ಜಮಾ ಮಾಡುವುದು. ಪ್ರತಿ ತಿಂಗಳು ಮಾರ್ಜಿನ್ ಸಾಲದ ವಸೂಲಾತಿ ಹಾಗೂ ಶೇಕಡಾ 4ರ ಬಡ್ಡಿ ಹಣವನ್ನು ನಿಗಮದ ಜಿಲ್ಲಾ ಕಛೇರಿಗಳಿಂದ ವಸೂಲಿ ಮಾಡಿ ನಿಗಮಕ್ಕೆ ತಪ್ಪದೆ ನಿಮಗದ ಸಂಬಂಧಿಸಿದ ಬ್ಯಾಂಕ್ ಖಾತೆಗೆ ಜಮೆ ಮಾಡುವುದು.
6. ಈ ಮಾರ್ಜಿನ್ ಮನಿ ಸಾಲವು 30 ತಿಂಗಳ ಅವಧಿಯ ಸಾಲ ಮರುಪಾವತಿ ಹೊಂದಿದ್ದು ಶೇ. 4ರ ಬಡ್ಡಿ ದರದಲ್ಲಿ ಒದಗಿಸಲಾಗುವುದು.
7. ಸಾಲ ವಸೂಲಿಯನ್ನು ನಿಗಮದ ಜಿಲ್ಲಾ ವ್ಯವಸ್ಥಾಪಕರು ಹಾಗೂ ಉಪ ನಿರ್ದೇಶಕರ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರವರು ಮತ್ತು ತಾಲ್ಲೂಕು ಶಿಶು ಅಭಿವೃದ್ಧಿ ಅಧಿಕಾರಿಗಳು ಹಾಗೂ ನಿಗಮದ ಅಭಿವೃದ್ಧಿ ನಿರೀಕ್ಷಕರು ತಮ್ಮ ಅಧೀನ ಅಧಿಕಾರಿಗಳ / ಸಿಬ್ಬಂದಿ ವರ್ಗದ ಮೂಲಕ ನಿರ್ವಹಿಸಿ, ಪ್ರತಿ ಅಕೌಂಟ್ ಬಗ್ಗೆ ಪೂರ್ಣ ವಿವರಗಳ / ಖಾತೆಗಳ ವಹಿಗಳನ್ನು ನಿರ್ವಹಿಸಬೇಕಾಗಿರುತ್ತದೆ.
8. ಈ ಮಾರ್ಜಿನ್ ಹಣದ ಸಾಲ ವಸೂಲಿಗೆ ನಿಮಗದ ಜಿಲ್ಲಾ ವ್ಯವಸ್ಥಾಪಕರು ಹಾಗೂ ಉಪ ನಿರ್ದೇಶಕರು ಪೂರ್ಣ ಜವಾಬ್ದಾರರಾಗಿರುತ್ತಾರೆ.
9. ಅಂಚಿನ ಹಣ ಸಾಲ ಮಂಜೂರಾತಿಯ ವಿವರಗಳನ್ನು ನಿಗದಿತ ನಮೂನೆಯಲ್ಲಿ ಒಳಗೊಂಡ ವಿವರಗಳೊಂದಿಗೆ ಸಾಲದ ರಿಜಿಸ್ಟರ್ ತೆರೆದು ನಮೂದಿಸುವುದು.
10. ಈ ಅಂಚಿನ ಹಣದ ಸಾಲದ ಮೊತ್ತ ಬಿಡುಗಡೆಗೆ ಆಧಾರಕ್ಕೆಂದು ಅವಶ್ಯವಾಗಿ ಕಂಡು ಬರುವ ಮಾರ್ಟ್‌ಗೇಜ್ ಹಾಗೂ ಗ್ಯಾರಂಟಿ ದಾಖಲಾತಿಗಳನ್ನು ಕೇಂದ್ರ ಕಛೇರಿ ಅಥವಾ ಜಿಲ್ಲೆಯ ಕಛೇರಿಯಲ್ಲಿ ಪಡೆದು ಧೃಢೀಕರಿಸುವುದರೊಂದಿಗೆ ನಿಗಮಕ್ಕೆ ಶಿಫಾರಸ್ಸು ಮಾಡಬೇಕು ಹಾಗೂ ಈ ದಾಖಲಾತಿಗಳನ್ನು ನಿಗಮದಲ್ಲಿ ಅಂಚಿನ ಹಣ ಸಾಲದ ಖಾತೆಯ ಮುಕ್ತಾಯದವರೆವಿಗೂ ಸುರಕ್ಷಿತವಾಗಿರಿಸಿ ಸಾಲ ಮುಕ್ತಾಯದ ನಂತರ ಜಿಲ್ಲಾ ಕಛೇರಿಯ ಮೂಲಕ ಫಲಾನುಭವಿಗೆ ಬಿಡುಗಡೆ ಮಾಡಲಾಗುವುದು.
11. ಈ ಯೋಜನೆಯಡಿ ನಿಗಮದ ವಿವೇಚನಾನಿಧಿ ಶೇ. 5 ರಷ್ಟನ್ನು ಒಟ್ಟು ಆಯವ್ಯಯದಲ್ಲಿ ಕಾದಿರಿಸುವುದು.
12. ಈ ಯೋಜನೆಯಡಿ ಪ್ರಯೋಜನ ಪಡೆದ ಮಹಿಳೆಯರು ನಿಗಮದ ಅಂಚಿನ ಹಣದ ಸಾಲದ ಮರುಪಾವತಿಯನ್ನು ಆಯಾ ಜಿಲ್ಲೆಯ ಜಿಲ್ಲಾ ಕಛೇರಿಗಳಲ್ಲಿ ಅಥವಾ ನಿಗಮದ ಕೇಂದ್ರ ಕಛೇರಿಗೆ ಮರುಪಾವತಿಸಿ ರಸೀದಿ ಪಡೆಯತಕ್ಕದ್ದು.

**ಸಾಲ ಮಂಜೂರಾತಿ ನಂತರ ಜಿಲ್ಲಾ ಕಛೇರಿಯಲ್ಲಿ ಅನುಸರಿಸಬೇಕಾದ ಕ್ರಮಗಳು :**

1. ನಿಗಮದಿಂದ ಮಂಜೂರು ಮಾಡಲಾದ ಸಹಾಯಧನ ಹಾಗೂ ಬ್ಯಾಂಕ್ ಸಾಲದಿಂದ ಮತ್ತು ನಿಗಮದ ಅಂಚಿನ ಹಣದ ಸಾಲದಿಂದ ಸೃಷ್ಠಿಸಲಾದ ಉತ್ಪಾದಕ ಘಟಕಗಳನ್ನು ತಪಾಸಣೆ ಮಾಡಿ ವರದಿಯನ್ನು

ನಿಗಮಕ್ಕೆ ಆಗಿಂದಾಗ್ಗೆ ಸಲ್ಲಿಸಬೇಕು. ಇದರ ಪ್ರತಿಯನ್ನು ಸಂಬಂಧಿಸಿದ ಫಲಾನುಭವಿಯ ಕಡತದಲ್ಲಿರಿಸಬೇಕು.

2. ಅಂಚಿನ ಹಣದ ಸಾಲ ವಿತರಣೆಯಾದ ಕೂಡಲೇ ಸಂಬಂಧಪಟ್ಟ ಲೆಡ್ಜರ್‌ನಲ್ಲಿ ಫಲಾನುಭವಿಯ ಭಾವಚಿತ್ರ ಲಗತ್ತಿಸಿ ಎಲ್ಲಾ ಮಾಹಿತಿಯನ್ನು ನಮೂದಿಸಿ (ಕಂತಿನ ವಿವರಗಳೊಂದಿಗೆ) ಖಾತೆ ತೆರೆಯಬೇಕು.
3. ನಿಗದಿಪಡಿಸಿದ ಕಂತುಗಳು ಸರಿಯಾಗಿ ಮರುಪಾವತಿ ಮಾಡದಿದ್ದಲ್ಲಿ ನೋಟೀಸ್ ಕಳುಹಿಸಬೇಕು.
4. ಅಂಚಿನ ಹಣದ ಸಾಲದ ಮೊತ್ತಕ್ಕೆ ವಾರ್ಷಿಕ ಶೇಕಡಾ 4ರ ಬಡ್ಡಿ ಇರುತ್ತದೆ.
5. ಕಂತು ಬಾಕಿ ಬರುವ ಖಾತೆಗಳನ್ನು ಗುರುತಿಸಿ ಒಂದು ತಿಂಗಳ ಮುಂಚೆ ಫಲಾನುಭವಿಗಳಿಗೆ ನೋಟೀಸ್ ಕಳುಹಿಸಬೇಕು.
6. ಅಂಚಿನ ಹಣ ಬಿಡುಗಡೆಯಾದ ನಂತರ ಕೇಂದ್ರ ಕಛೇರಿಗೆ ನಿಗದಿಪಡಿಸಿದ ನಮೂನೆಯಲ್ಲಿ ಹಣ ವಿನಿಯೋಗ ಪ್ರಮಾಣ ಪತ್ರ ಕಳುಹಿಸಬೇಕು. ಇದರಲ್ಲಿ ಫಲಾನುಭವಿಯ ಹೆಸರು, ವಿಳಾಸದ ಜೊತೆಗೆ ಸಾಲದ ಮೊತ್ತ, ಅಂಚಿನ ಹಣದ ಮೊತ್ತವನ್ನು ಪಾವತಿ ಮಾಡಿದ ಚೆಕ್ ಸಂಖ್ಯೆ, ದಿನಾಂಕ ಬ್ಯಾಂಕಿನ ಹೆಸರು ಮತ್ತು ಇತ್ಯಾದಿ ವಿವಗಳನ್ನು ನಮೂದಿಸಬೇಕು.

**ಅಂಚಿನ ಹಣ ಸಾಲ ಬಾಕಿ ಪಟ್ಟಿ ತಯಾರಿಕೆ :**

1. ವರ್ಷವಾರು, ತಾಲ್ಲೂಕುವಾರು, ಯೋಜನಾವಾರು ಪ್ರತಿಯೊಬ್ಬ ಫಲಾನುಭವಿಯಿಂದ ಬರಬೇಕಾದ ಅಂಚಿನ ಹಣದ ಸಾಲದ ಮೇಲಿನ ಅಸಲು ಮತ್ತು ಬಡ್ಡಿಯ ವಿವರವಾದ ಪಟ್ಟಿಯನ್ನು ಜಿಲ್ಲಾ ಕಛೇರಿಯಲ್ಲಿ ತಯಾರಿಸಿಕೊಳ್ಳಬೇಕು.
2. ಪ್ರತಿಯೊಬ್ಬ ಫಲಾನುಭವಿಯಿಂದ ವಸೂಲಾತಿ ವರ್ಷದಲ್ಲಿ ಮಾಹೆವಾರು ಅರ್ಧವರ್ಷವಾರು ವಸೂಲು ಮಾಡಬೇಕಾದ ಕಂತಿನ ಮೊತ್ತದ (ಹಿಂದಿನ ವರ್ಷಗಳ ಬಾಕಿ ಕಂತು ಸೇರಿದಂತೆ) ವಿವರಗಳನ್ನು ಪ್ರತ್ಯೇಕವಾಗಿ ಪ್ರತಿ ವರ್ಷ ಏಪ್ರಿಲ್ ಮಾಹೆಯಲ್ಲಿ ತಯಾರಿಸಿಕೊಳ್ಳಬೇಕು. ಹಿಂದಿನ ವರ್ಷದಲ್ಲಿ ಸಾಲ ನೀಡಿದ್ದು, ಈ ವರ್ಷದಲ್ಲಿ ಕಂತು ಪಾವತಿಗೆ ಬರುವಂತಹ ಪ್ರಕರಣಗಳನ್ನು ಸೇರಿಸಿಕೊಳ್ಳಬೇಕು.
3. ಆಯಾ ತಿಂಗಳಲ್ಲಿ ಅಂಚಿನ ಹಣ ಸಾಲ ಮಂಜೂರಾದಂತೆ, ಸಂಬಂಧಪಟ್ಟ ಲೆಡ್ಜರ್‌ನಲ್ಲಿ ಖಾತೆ ತೆರೆದು ಎಲ್ಲಾ ಮಾಹಿತಿ ನಮೂದಿಸಿಕೊಳ್ಳಬೇಕು. ಇದೇ ರೀತಿ ಸಾಲ ವಸೂಲಾದಂತೆ ಸಂಬಂಧಪಟ್ಟ ಖಾತೆಗೆ ಅಸಲು ಮತ್ತು ಬಡ್ಡಿ ಆಯಾ ದಿನಗಳಲ್ಲಿ ಜಮಾ ನೀಡಬೇಕು.
4. ಆಯಾ ಫಲಾನುಭವಿಯ ಅಂಚಿನ ಹಣದ ಸಾಲದ ಮೇಲಿನ ಕಂತು ಬಾಕಿ ಬಂದಂತೆ 15 ದಿವಸಗಳ ನೋಟೀಸನ್ನು ಮುಂಚಿತವಾಗಿ ಕಳಿಸಬೇಕು. ನಿಗದಿತ ಅವಧಿಗೆ ಮುಂಚಿತವಾಗಿ ಕಂತಿನ ಬಾಕಿ ಮತ್ತು ಹಿಂಬಾಕಿ ನಮೂದಿಸಿ ಕಳಿಸಬೇಕು.
5. ಅಂಚಿನ ಹಣ ಸಾಲ ಬಿಡುಗಡೆ ಮಾಡುವಾಗ ಫಲಾನುಭವಿಗೆ ಸಾಲ ಮರುಪಾವತಿ ಶೆಡ್ಯೂಲ್ ತಯಾರಿಸಿ ನೀಡಬೇಕು. ಇದರಲ್ಲಿ ಕಾಲಕಾಲಕ್ಕೆ ಮರುಪಾವತಿ ಮಾಡಬೇಕಾದ ಅಸಲು, ಬಡ್ಡಿಯ ವಿವರಗಳನ್ನು ನಮೂದಿಸಿರಬೇಕು.
6. ನೋಟೀಸ್ ನೀಡಿಯೂ ಅಂಚಿನ ಹಣ ಸಾಲ ಮರುಪಾವತಿ ಬಾರದಿದ್ದಲ್ಲಿ ಫಲಾನುಭವಿಯನ್ನು ಸಂಪರ್ಕಿಸಿ ಬಾಕಿ ಕಂತು ಮರುಪಾವತಿಸಲು ಕಟ್ಟುನಿಟ್ಟಾಗಿ ಎಚ್ಚರಿಕೆ ನೀಡಿ ಮರುಪಾವತಿ ಮಾಡುವಂತೆ ಪ್ರೇರೇಪಿಸಿ ಮನವೊಲಿಸುವುದು.
7. ಎಲ್ಲಾ ಬಾಕಿದಾರರಿಗೆ ನೋಟೀಸ್‌ಗಳನ್ನು ಕಳಿಸುವ ಅಧಿಕಾರ ಜಿಲ್ಲಾ ವ್ಯವಸ್ಥಾಪಕರು, ಕ.ರಾ.ಮ.ಅ. ನಿಗಮ ರವರಿಗೆ ಇರುತ್ತದೆ.
8. ನಗದು/ ಡಿಡಿ/ ಚೆಕ್ ಮೂಲಕ ಫಲಾನುಭವಿಯು ನಿಗಮಕ್ಕೆ ಮರುಪಾವತಿ ಮಾಡಬಹುದಾಗಿರುತ್ತದೆ.
9. ಒಂದು ವೇಳೆ ಉಳಿದ ಮೊತ್ತದ ಬಗ್ಗೆ ಫಲಾನುಭವಿಗಳಿಗೆ ಅನುಮಾನ ಇದ್ದಲ್ಲಿ ಹಣವನ್ನು ತುಂಬಿ ತದನಂತರ ಈ ಬಗ್ಗೆ ತಾವು ಜಿಲ್ಲಾ ವ್ಯವಸ್ಥಾಪಕರಿಗೆ ಅಪೀಲು ಮಾಡಿಕೊಳ್ಳಬಹುದಾಗಿದೆ. ಹೆಚ್ಚಿಗೆ ಹಣ ತುಂಬಿದ್ದಲ್ಲಿ, ಕೇಂದ್ರ ಕಛೇರಿಯ ಅನುಮತಿ ಪಡೆದು ಜಿಲ್ಲಾ ವ್ಯವಸ್ಥಾಪಕರು ಕ್ರಾಸ್ ಮಾಡಿದ ಚೆಕ್ ಅಥವಾ ಡಿ.ಡಿ. ಮುಖಾಂತರ ವಾಪಸ್ಸು ಮಾಡಬಹುದಾಗಿರುತ್ತದೆ. ಯಾವುದೇ ಕಾರಣಕ್ಕೂ ನಗದು ರೂಪದಲ್ಲಿ ಕೊಡಬಾರದು.
10. ಜಿಲ್ಲಾ ವ್ಯವಸ್ಥಾಪಕರು, ಕ.ರಾ.ಮ.ಅ. ನಿಗಮ ರವರ ಕಛೇರಿಯಲ್ಲಿ ವಸೂಲು ಮಾಡಿದ ಹಣವನ್ನು ನಿಗಮದ ಜಿಲ್ಲಾ ವ್ಯವಸ್ಥಾಪಕರ ಹೆಸರಿನಲ್ಲಿ ಪ್ರಾರಂಭಿಸಿರುವ ಉಳಿತಾಯ ಖಾತೆಗೆ ಜಮಾ ಮಾಡಬೇಕು.

ಆರ್ಥಿಕ ವರ್ಷದ ಕೊನೆಯ ಭಾಗದಲ್ಲಿ ವಹಿಸಲಾದ ಸಾಲದ ಹಣ ಮತ್ತು ಬಡ್ಡಿ ಹಣವನ್ನು ಪಿ.ಡಿ. ಅಕೌಂಟ್‌ಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರು ಮರುಪಾವತಿಸತಕ್ಕದ್ದು.

11. ಸಾಲ ವಸೂಲು ಮಾಡಿದ ಹಣಕ್ಕೆ ರಸೀತಿಯ ಮೂಲ (ಒರಿಜಿನಲ್) ಪ್ರತಿಯನ್ನು ಫಲಾನುಭವಿಗೆ ನೀಡಬೇಕು. ಎರಡನೆ ಪ್ರತಿಯನ್ನು ನಿಗಮಕ್ಕೆ ಹಾಗೂ ಮೂರನೇ ಪ್ರತಿಯನ್ನು ರಸೀದಿ ಪುಸ್ತಕದಲ್ಲಿ ಉಳಿಸಿಕೊಳ್ಳುವುದು.
12. ಬ್ಯಾಂಕಿನ ಶಾಖೆಗಳಲ್ಲಿ ಹಾಗೂ ಜಿಲ್ಲಾ ಕಛೇರಿಯಲ್ಲಿ ವಸೂಲಾದ ಮೊತ್ತವನ್ನು ತಿಂಗಳಿಗೊಮ್ಮೆ ವ್ಯವಸ್ಥಾಪಕ ನಿರ್ದೇಶಕರ ಹೆಸರಿಗೆ ಡಿ.ಡಿ. ಮಾಡಿ ಎಲ್ಲಾ ವಿವರಗಳೊಂದಿಗೆ ಮುಂದಿನ ತಿಂಗಳ 10ನೇ ತಾರೀಖಿನೊಳಗೆ ಕಳಿಸುವುದು. ಜಿಲ್ಲಾ ವ್ಯವಸ್ಥಾಪಕರ ಜವಾಬ್ದಾರಿಯಾಗಿರುತ್ತದೆ. ತಿಂಗಳ ವಸೂಲಾತಿ ಅಂಕಿ–ಅಂಶ ಮತ್ತು ಡಿ.ಡಿ. ಮೊತ್ತ ಒಂದಕ್ಕೊಂದು ತಾಳೆಯಾಗತಕ್ಕದ್ದು.
13. ನೋಟೀಸ್ ಜಾರಿ ಮಾಡಿ ಹಾಗೂ ಖುದ್ದಾಗಿ ಸಂಪರ್ಕಿಸಿದರೂ ಸಾಲ ಮರುಪಾವತಿ ಮಾಡದಿದ್ದಲ್ಲಿ ಸಾಲದಿಂದ ಸೃಷ್ಟಿಯಾದ ಸ್ವತ್ತಿನ ಮೇಲೆ ಕ್ರಮ ತೆಗೆದುಕೊಳ್ಳುವುದು.
14. ಚೆಕ್ ಮುಖಾಂತರ ಮರುಪಾವತಿ ಮಾಡಿದಾಗ ಈ ಚೆಕ್‌ಗಳು ಪಾಸಾಗಿ ಹಣ ಜಮೆಯಾದ ನಂತರವೇ, ವಸೂಲಾತಿ ಮೊತ್ತಕ್ಕೆ ಲೆಕ್ಕ ತೆಗೆದುಕೊಳ್ಳಬೇಕು. ಹಿಂದಿನ ತಿಂಗಳಲ್ಲಿ ಚೆಕ್ ನೀಡಿದ್ದು, ಮಾರನೆಯ ತಿಂಗಳಲ್ಲಿ ಹಣ ಜಮಾ ಆದಲ್ಲಿ ಜಮಾ ಆದ ತಿಂಗಳಿನ ಲೆಕ್ಕಕ್ಕೆ ವಸೂಲಾತಿ ತೆಗೆದುಕೊಳ್ಳಬೇಕು.

**ಸುಸ್ತಿದಾರರಿಂದ ಸಾಲ ಮರುಪಾವತಿ ಬಗ್ಗೆ :**

ಕಾಲಕ್ಕೆ ಅಂಚಿನ ಹಣ ಸಾಲವನ್ನು ಹಿಂತಿರುಗಿಸದೆ ಇರುವ ಸುಸ್ಥಿದಾರರಿಂದ ಸಾಲ ವಸೂಲಿ ಮಾಡಲು ಫಲಾನುಭವಿಗಳ ಹೆಸರಿನ ಅಥವಾ ಕುಟುಂಬದವರ ಚರ ಮತ್ತು ಸ್ಥಿರ ಆಸ್ತಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸರ್ಕಾರದ ನಿಯಮಾವಳಿಗಳ ಪ್ರಕಾರ ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಹಾಗೂ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರು ಕ್ರಮ ಕೈಗೊಂಡು ವಸೂಲಿಯಾದ ಅಂಚಿನ ಹಣ ಸಾಲದ ಮೊತ್ತ ಹಾಗೂ ಬಡ್ಡಿ ಹಣವನ್ನು ನಿಗಮದ ಖಾತೆಗೆ ಜಮಾ ಮಾಡುವುದು.

**ಜಿಲ್ಲಾ ವ್ಯವಸ್ಥಾಪಕರ ಕರ್ತವ್ಯ ಮತ್ತು ಜವಾಬ್ದಾರಿಗಳು**

1. ಜಿಲ್ಲಾ ವ್ಯವಸ್ಥಾಪಕರು ತಮ್ಮ ಜಿಲ್ಲೆಯ ವ್ಯಾಪ್ತಿಯಲ್ಲಿ ನಿಗಮದ ಯೋಜನೆಗಳ ಅನುಷ್ಠಾನ ಮತ್ತು ಸಾಲ ವಸೂಲಾತಿಗೆ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.
2. ಅರ್ಜಿಗಳನ್ನು ಸ್ವೀಕರಿಸಿದ ನಂತರ ಖುದ್ದು ಪ್ರತಿಯೊಬ್ಬ ಅರ್ಜಿದಾರರನ್ನು ಅಭಿವೃದ್ಧಿ ನಿರೀಕ್ಷಕರು ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳನ್ನು ಸಂಪರ್ಕಿಸಿ ಅರ್ಹತೆ ಮತ್ತು ಘಟಕದ ಬಗ್ಗೆ ಸ್ಥಳ ಪರಿಶೀಲನೆ ನಡೆಸಿ ನಿಗದಿತ ದಿನಾಂಕದೊಳಗೆ ಸಂಬಂಧಪಟ್ಟ ಆಯ್ಕೆ ಸಮಿತಿಗೆ ಮಂಡಿಸಿ ಆಯ್ಕೆ ಪ್ರಕ್ರಿಯೆ ಪೂರ್ಣಗೊಳಿಸಬೇಕು.
3. ಅರ್ಜಿಗಳನ್ನು ಬ್ಯಾಂಕುಗಳಿಗೆ ಶಿಫಾರಸ್ಸು ಮಾಡುವಾಗ ಗುರಿಗೆ ತಕ್ಕಂತೆ / ಹಣಕಾಸು ಲಭ್ಯತೆ ಆಧರಿಸಿ ಅರ್ಜಿಗಳನ್ನು ಕಳುಹಿಸಬೇಕು.
4. ಎಲ್ಲ ಸಂದರ್ಭದಲ್ಲೂ ನಿಗಮದ ಮತ್ತು ಫಲಾನುಭವಿಗಳ ಹಿತವನ್ನು ಕಾಪಾಡುವ ರೀತಿಯಲ್ಲಿ ಕೆಲಸ ನಿರ್ವಹಿಸಬೇಕು.
5. ಬ್ಯಾಂಕುಗಳಿಗೆ ಸಹಾಯಧನ/ ಅಂಚಿನ ಹಣ ಬಿಡುಗಡೆ ಮಾಡಿದ ಗರಿಷ್ಟ 60 ದಿನಗಳೊಳಗೆ ಬ್ಯಾಂಕ್ ಸಾಲದ ಜೊತೆ ಫಲಾನುಭವಿಗಳಿಗೆ ವಿತರಣೆಯಾಗುವಂತೆ ನೋಡಿಕೊಳ್ಳಬೇಕು.
6. ಆಗಿಂದಾಗ್ಗೆ ಬ್ಯಾಂಕ್ ಶಾಖೆಗಳಿಗೆ ಭೇಟಿ ನೀಡಿ ಹಣ ವಿತರಣೆಯಾದ ಬಗ್ಗೆ ಖಾತರಿಪಡಿಸಿಕೊಂಡು ಹಣ ವಿನಿಯೋಗ ಪ್ರಮಾಣ ಪತ್ರ ಪಡೆದು ಕಡತಕ್ಕೆ ಲಗತ್ತಿಸಬೇಕು.
7. ಸಾಲ ಬಿಡುಗಡೆಗೆ ಮುನ್ನ ಪ್ರತಿಯೊಬ್ಬ ಫಲಾನುಭವಿಗಳಿಂದ ಪಡೆಯುವ ಪ್ರೋನೋಟ್ ಹಾಗೂ ಇತರೆ ದಾಖಲಾತಿಗಳನ್ನು ಪೂರ್ಣವಾಗಿ ಭರ್ತಿ ಮಾಡಬೇಕು. ಈ ದಾಖಲಾತಿಗಳನ್ನು ಫಲಾನುಭವಿಯಿಂದ ಸೂಕ್ತವಾಗಿ ಸಹಿ ಮಾಡಿಸಿ ಸಹಿಯನ್ನು ಧೃಢೀಕರಿಸಬೇಕು.
8. ಸಾಲ–ಸೌಲಭ್ಯ ಒದಗಿಸಿದ ಒಂದು ತಿಂಗಳೊಳಗೆ ಘಟಕ ಪರಿಶೀಲಿಸಿ, ಘಟಕ ಪರಿಶೀಲನಾ ವರದಿ ಮತ್ತು ಘಟಕದ ಪೋಟೋ ಕಡತದಲ್ಲಿ ಜೋಡಿಸಿಕೊಳ್ಳಬೇಕು.
9. ನಿಗಮದ ಜಿಲ್ಲಾ ಕಛೇರಿಯಿಂದ ಖರ್ಚು ಮಾಡಿದ ಎಲ್ಲಾ ಮೊತ್ತಕ್ಕೆ ಜಿಲ್ಲಾ ವ್ಯವಸ್ಥಾಪಕರು ಜವಾಬ್ದಾರರಾಗಿದ್ದು ಸರಿಯಾದ ಲೆಕ್ಕಾಚಾರ ಇಟ್ಟುಕೊಳ್ಳಬೇಕು.

**2007–08ನೇ ಸಾಲಿನ ನಿರ್ಣಯಿಸಿದ ಗುರಿ.**

2006–07ನೇ ಸಾಲಿಗೆ ಬೆಂಗಳೂರು ನಗರ ಜಿಲ್ಲೆಗೆ 250 ಹಾಗೂ ಉಳಿದ 26 ಜಿಲ್ಲೆಗಳಿಗೆ ಪ್ರತಿ ಜಿಲ್ಲೆಗೆ 50 ಫಲಾನಭವಿಗಳಂತೆ ರಾಜ್ಯದಲ್ಲಿ 1550 ಫಲಾನುಭವಿಗಳಿಗೆ ಈ ಯೋಜನೆಯಡಿ ಸಾಲ ಸೌಲಭ್ಯ ಒದಗಿಸಲು ಪ್ರಸ್ತಾಪಿಸಲಾಗಿದೆ.

ಪ್ರಸ್ತುತ ಸಾಲಿನಲ್ಲಿ ಈ ಯೋಜನೆಯಡಿ ಒಟ್ಟು ಗುರಿಯಲ್ಲಿ

ಪರಿಶಿಷ್ಟ ಜಾತಿ ಶೇಕಡ 15

ಪರಿಶಿಷ್ಟ ಪಂಗಡ ಶೇಕಡ 3

ಅಂಗವಿಕಲೆಯರಿಗೆ ಶೇಕಡ 5

ವಿಧವೆಯರಿಗೆ ಶೇಕಡ 5

ಸಂಕಷ್ಟಕ್ಕೊಳಗಾದ ಮಹಿಳೆಯರಿಗೆ ಶೇಕಡ 2

ಅಲ್ಪ ಸಂಖ್ಯಾತರಿಗೆ ಶೇಕಡ 10

ಇತರೆ ಮಹಿಳೆಯರಿಗೆ ಶೇಕಡ 60ರಷ್ಟು ಮೀಸಲಾತಿ ಮಾಡಲಾಗಿದೆ.

ಇವುಗಳಲ್ಲಿ ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖಾ ಸಚಿವರು / ಇಲಾಖಾ ಕಾರ್ಯದರ್ಶಿಗಳು ಮತ್ತು ವ್ಯವಸ್ಥಾಪಕ, ನಿರ್ದೇಶಕರಿಗೆ ವಿವೇಚನೆ ಕೋಟಾದಲ್ಲಿ ಶೇಕಡ 5ರಷ್ಟು ಕಾಯ್ದಿರಿಸಲಾಗಿದೆ.

**2007–08ನೇ ಸಾಲಿಗೆ ಆಯವ್ಯಯ :**

2007–08ನೇ ಸಾಲಿನಲ್ಲಿ 1550 ಮಹಿಳೆಯರಿಗೆ ಈ ಯೋಜನೆಯಡಿ ಪ್ರಯೋಜನ ಕಲ್ಪಿಸಲು ಈ ಕೆಳಗಿನ ಆಯವ್ಯಯ ಅವಶ್ಯವಿರುತ್ತದೆ.

| | |
|---|---|
| ಸಹಾಯಧನ ಗರಿಷ್ಟ ರೂ. 10,000 x 1550 | ರೂ. 1,55,00,000 |
| ಮಾರ್ಜಿನ್ ಹಣ ಗರಿಷ್ಟ ರೂ. 25,000 x 1550 | ರೂ. 3,87,50,000 |
| ಮೊತ್ತ | ರೂ. 5,42,50,000 |

**ವಿ. ಶಿವಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಅರ್ಜಿ ಶುಲ್ಕ ರೂ. ................ಮಾತ್ರ
(ತ್ರಿ ಪ್ರತಿಯಲ್ಲಿ)

**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ**
(ಕರ್ನಾಟಕ ಸರ್ಕಾರದ ಒಂದು ಉದ್ಯಮ)
ಕೇಂದ್ರ ಕಛೇರಿ, ಬೆಂಗಳೂರು.

ಜಿಲ್ಲೆ [ ] ಕ್ರಮ ಸಂಖ್ಯೆ: [ಭಾವಚಿತ್ರ]

ಅರ್ಜಿ ವಿತರಿಸಿದ ದಿನಾಂಕ:

ತಾಲ್ಲೂಕು :

**'ಆಸರೆ' ಯೋಜನೆಯಡಿ ಸೌಲಭ್ಯ ಕೋರಿ ಅರ್ಜಿ**

(ಪುಟ (4)ರಲ್ಲಿ ನೀಡಿರುವ ಸೂಚನೆಗಳನ್ನು ಅನುಸರಿಸಿ ಅರ್ಜಿಯನ್ನು ಭರ್ತಿ ಮಾಡುವುದು)

1) ಅರ್ಜಿದಾರರ ಹೆಸರು ಮತ್ತು ಖಾಯಂ ವಿಳಾಸ :

2) ತಂದೆ / ಗಂಡನ ಹೆಸರು :

3) ವಯಸ್ಸು ಮತ್ತು ವಿದ್ಯಾರ್ಹತೆ :

4) ಜಾತಿ ಮತ್ತು ಉಪ ಜಾತಿ
(ಜಾತಿ ಪ್ರಮಾಣ ಪತ್ರ ಲಗತ್ತಿಸಬೇಕು) :

5) ಕುಟುಂಬದ ಇತ್ತೀಚಿನ ವಾರ್ಷಿಕ ವರಮಾನ
(ಆದಾಯ ಪ್ರಮಾಣ ಪತ್ರ ಲಗತ್ತಿಸಬೇಕು) :

6) ಪಡಿತರ ಚೀಟಿ ಸಂಖ್ಯೆ
(ನಕಲು ಪ್ರತಿ ಲಗತ್ತಿಸಬೇಕು) :
7) ಸಾಲ ಕೋರಿರುವ ಉದ್ದೇಶ :
8) ಯೋಜನಾ ವೆಚ್ಚ
(ವಿವರವಾದ ಯೋಜನಾ ವರದಿ ಲಗತ್ತಿಸಬೇಕು) :
ಅ) ಭೂಮಿ ...... ಸ್ವಂತ/ಲೀಸ್ : ರೂ.
ಆ) ಕಟ್ಟಡ ...... ಸ್ವಂತ/ ಬಾಡಿಗೆ/ ಹೊಸ ಕಟ್ಟಡ : ರೂ.
ಇ) ಯಂತ್ರೋಪಕರಣಗಳು : ರೂ.
ಈ) ಇತರೆ ವೆಚ್ಚ : ರೂ.
ಉ) ದುಡಿಮೆ ಬಂಡವಾಳ : ರೂ.
ಊ) ಒಟ್ಟು ಯೋಜನಾ ವೆಚ್ಚ : ರೂ.
9) ಸೌಲಭ್ಯ ಕೋರಿರುವ ಉದ್ದೇಶದಲ್ಲಿ ಅರ್ಜಿದಾರರಿಗೆ
ಇರುವ ಅನುಭವದ ಬಗ್ಗೆ ವಿವರಣೆ :
10) ಉದ್ದೇಶಿತ ಚಟುವಟಿಕೆಯಲ್ಲಿ ಪಡೆದ ತರಬೇತಿಯ
ಬಗ್ಗೆ ಮಾಹಿತಿ :
(ತರಬೇತಿ ಪಡೆದ ಬಗ್ಗೆ ದೃಢೀಕರಣ ಪತ್ರ ಲಗತ್ತಿಸುವುದು)
11) ಅರ್ಜಿದಾರರ ಸ್ಥಳದ ಸೇವಾ ವ್ಯಾಪ್ತಿಯಲ್ಲಿ ಬರುವ
ಬರುವ ಬ್ಯಾಂಕ್‌ಗಳ ಬಗ್ಗೆ ವಿವರ :
12) ಹಣಕಾಸು ಮೂಲ
ಅ) ಅಭ್ಯರ್ಥಿಯ ಪಾಲು : ರೂ.
ಆ) ನಿಗಮದಿಂದ ಅಂಚಿನ ಹಣ ಸಾಲ : ರೂ.
ಇ) ಅವಧಿ ಸಾಲ : ರೂ.
ಈ) ದುಡಿಮೆ ಬಂಡವಾಳ : ರೂ.
ಒಟ್ಟು : ರೂ.
13) ಅವಶ್ಯಕತೆ ಇರುವ ವಿದ್ಯುಚ್ಛಕ್ತಿ :
14) ಮಾರುಕಟ್ಟೆ ವ್ಯವಸ್ಥೆ ಹೊಂದಿಸಿಕೊಳ್ಳುವ ಬಗ್ಗೆ ವಿವರ :

ಮೇಲಿನ ಎಲ್ಲಾ ಅಂಶಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿರುತ್ತದೆ ಮತ್ತು ಸುಳ್ಳೆಂದು ಕಂಡು ಬಂದಲ್ಲಿ ನಿಗಮವು ಅನುಸರಿಸುವ ಕ್ರಮಕ್ಕೆ ಬದ್ಧನಾಗಿದ್ದೇನೆ. ನಿಗಮದಿಂದ ಪಡೆದ ಸೌಲಭ್ಯವನ್ನು ಸೂಕ್ತವಾಗಿ ಉಪಯೋಗಿಸಿಕೊಳ್ಳುತ್ತೇನೆ. ಹಾಗೂ ವಿಧಿಸುವ ನಿಯಮದಂತೆ ಮರುಪಾವತಿ ಮಾಡಲು ಸಿದ್ದಳಿದ್ದೇನೆ.

ಸ್ಥಳ :
ದಿನಾಂಕ : ಅರ್ಜಿದಾರಳ ಸಹಿ

**ಅರ್ಜಿಯನ್ನು ಭರ್ತಿ ಮಾಡುವ ಬಗ್ಗೆ ಅರ್ಜಿದಾರರಿಗೆ ಸೂಚನೆಗಳು**

1. ಸ್ವಯಂ ವಿವರಣೆಯನ್ನು ಅಕ್ಷರಗಳಲ್ಲಿ ನಮೂದಿಸುವುದು.
2. ಅನ್ವಯವಾಗದಿರುವುದನ್ನು ಹೊಡೆದು ಹಾಕಿ (ತಂದೆ/ ಗಂಡ)
3. ಅರ್ಜಿ ಸಲ್ಲಿಸುವ ದಿನಾಂಕದಂದು ಅರ್ಜಿದಾರರ ಪೂರ್ಣಗೊಂಡ ವರ್ಷಗಳನ್ನು ಹಾಗೂ ಎಲ್ಲಿಯವರೆವಿಗೆ ಓದಿರುವರೆಂಬುದನ್ನು ನಮೂದಿಸಬೇಕು.
4. ಜಾತಿಯ ವಿವರವನ್ನು ಸ್ಪಷ್ಟವಾಗಿ ನಮೂದಿಸಬೇಕು.
5. ಇತ್ತೀಚೆಗೆ ಪಡೆದ ಆದಾಯ ಪ್ರಮಾಣ ಪತ್ರದಲ್ಲಿ ತಿಳಿಸಲಾಗಿರುವ ವಾರ್ಷಿಕ ಆದಾಯದ ಮೊತ್ತವನ್ನು ನಮೂದಿಸಬೇಕು.
6. ಪಡಿತರ ಚೀಟಿಯ ವಿವರವನ್ನು ನಮೂದಿಸಬೇಕು.
7. ಸಾಲ ಕೋರಿರುವ ವಿವರ ಉದ್ದೇಶವನ್ನು ಸ್ಪಷ್ಟವಾಗಿ ನಮೂದಿಸಬೇಕು.
8. ಸ್ವಯಂ ವಿವರಿತ
ಅ) ಅಭ್ಯರ್ಥಿಯ ಪಾಲು : ಸಾಲ ಕೋರಿರುವ ಒಟ್ಟು ಹಣದ ಶೇಕಡ 5ರಷ್ಟು
ಆ) ನಿಗಮದಿಂದ ಅಂಚಿನ ಹಣ ಸಾಲ : ಸಾಲ ಕೋರಿರುವ ಒಟ್ಟು ಹಣದ ಶೇಕಡ 25ರಷ್ಟು
(ಗರಿಷ್ಟ ಮಿತಿ ರೂ. 25,000/– ಗಳಿಗೆ ಒಳಪಟ್ಟಂತೆ)

ಇ) ಅವಧಿ ಸಾಲ : ಸಾಲದ ಒಟ್ಟು ಮೊತ್ತದಲ್ಲಿ ಮೇಲಿನ 2 ಪಾಲನ್ನು ಕಳೆದು ಉಳಿದ ಮೊತ್ತವನ್ನು ನಮೂದಿಸಬೇಕು.

9. ಉದ್ದೇಶಿತ ಘಟಕದಲ್ಲಿ ಉತ್ಪನ್ನಗಳನ್ನು ಮಾರಾಟ ಮಾಡುವ ಬಗ್ಗೆ ಆಯೋಜಿಸಿಕೊಂಡಿರುವ ಕ್ರಮಗಳನ್ನು ವಿವರಿಸಬೇಕು.

ಅರ್ಜಿದಾರರು ಅರ್ಜಿಯ ಕೊನೆಯಲ್ಲಿ ಸಹಿ ಮಾಡುವುದರ ಜೊತೆಗೆ ಎಡಭಾಗದಲ್ಲಿ ಅವರ ಸ್ಥಳ ಮತ್ತು ಭರ್ತಿ ಮಾಡಿದ ಅರ್ಜಿಯನ್ನು ಜಿಲ್ಲಾ ಕಛೇರಿಗಳಿಗೆ ಸಲ್ಲಿಸುವ ದಿನಾಂಕವನ್ನು ತಪ್ಪದೆ ನಮೂದಿಸಬೇಕು.

**ತಪಶೀಲು ಪಟ್ಟಿ / ಚೆಕ್ ಲಿಸ್ಟ್**

ಅರ್ಜಿಯೊಂದಿಗೆ ಯಾವ ಯಾವ ದಾಖಲೆಗಳ ಪ್ರತಿಗಳನ್ನು ಲಗತ್ತಿಸಲಾಗಿದೆ ಅಥವಾ ಇಲ್ಲ ಎಂಬುದರ ಬಗ್ಗೆ ಅನ್ವಯವಾಗುವ ಚೌಕಟ್ಟಿನಲ್ಲಿ (√) ಗುರುತು ಹಾಕಬೇಕು ಹಾಗೂ ಕೊನೆಯಲ್ಲಿ ಅರ್ಜಿದಾರರು ಮತ್ತೆ ಸಹಿ ಮಾಡಬೇಕು.

ಅರ್ಜಿಯ ಮೊದಲ ಪುಟದ ಮೇಲ್ಭಾಗದಲ್ಲಿ ಗೊತ್ತುಪಡಿಸಿರುವ ಸ್ಥಳದಲ್ಲಿ ಅರ್ಜಿದಾರರ ಇತ್ತೀಚಿನ ಭಾವಚಿತ್ರವನ್ನು ಲಗತ್ತಿಸಿ, ಭರ್ತಿ ಮಾಡಿದ ಅರ್ಜಿಯನ್ನು ದ್ವಿಪ್ರತಿಗಳಲ್ಲಿ ಅಗತ್ಯ ಅಡಕಗಳೊಂದಿಗೆ ಸಂಬಂಧಪಟ್ಟ ಜಿಲ್ಲಾ ಕಛೇರಿಗೆ ಸಲ್ಲಿಸಿ ಸ್ವೀಕೃತಿಯನ್ನು ಪಡೆಯಬೇಕು.

**ತಪಶೀಲು ಪಟ್ಟಿ : ಚೆಕ್ ಲಿಸ್ಟ್**

| | | | | | |
|---|---|---|---|---|---|
| 1) | ಜಾತಿ ದೃಢೀಕರಣ ಪತ್ರ | | ಲಗತ್ತಿಸಿದೆ | | ಇಲ್ಲ |
| 2) | ಇತ್ತೀಚಿನ ಕುಟುಂಬದ ವಾರ್ಷಿಕ ಆದಾಯ ಪ್ರಮಾಣ ಪತ್ರ | | ಲಗತ್ತಿಸಿದೆ | | ಇಲ್ಲ |
| 3) | ಖಾಯಂ ವಿಳಾಸದ ಬಗ್ಗೆ ಪಡಿತರ ಚೀಟಿ/ ಮತದಾರರ ಗುರುತಿನ ಚೀಟಿ/ ವರ್ಗಾವಣೆ (ಟಿಸಿ) | | ಲಗತ್ತಿಸಿದೆ | | ಇಲ್ಲ |
| 4) | ವಯಸ್ಸಿನ ಬಗ್ಗೆ ದೃಢೀಕರಣ | | ಲಗತ್ತಿಸಿದೆ | | ಇಲ್ಲ |
| 5) | ವಿವರವಾದ ಯೋಜನಾ ವರದಿ | | ಲಗತ್ತಿಸಿದೆ | | ಇಲ್ಲ |
| 6) | ಉದ್ದೇಶಿತ ಚಟುವಟಿಕೆಯಲ್ಲಿ ತರಬೇತಿಯಾದ ಬಗ್ಗೆ ಮತ್ತು ವಿದ್ಯಾರ್ಹತೆ ಬಗ್ಗೆ ದೃಢೀಕರಣ ಪತ್ರ | | ಲಗತ್ತಿಸಿದೆ | | ಇಲ್ಲ |

ಅರ್ಜಿದಾರಳ ಸಹಿ

**ಸ್ವೀಕೃತಿ**

ಜಿಲ್ಲೆ : ಕ್ರಮ ಸಂಖ್ಯೆ :

ತಾಲ್ಲೂಕು : ಅರ್ಜಿ ಸ್ವೀಕರಿಸಿದ ದಿನಾಂಕ :

**ಆಸರೆ ಯೋಜನೆ**

ಕು/ಶ್ರೀಮತಿ ..........................................................................................................................

ಇವರಿಂದ ಕ್ರ.ಸಂ. .......................... ಅರ್ಜಿಯನ್ನು ..................................... ಚಟುವಟಿಕೆಯಲ್ಲಿ ಘಟಕ ಪ್ರಾರಂಭಿಸಲು ನೆರವಾಗುವ ಆಸರೆ ಯೋಜನೆಯಲ್ಲಿ ಸಾಲ, ಅಂಚಿನ ಸಾಲ ಹಾಗೂ ಸಹಾಯಧನ ಒದಗಿಸುವ ಉದ್ಧೇಶಕ್ಕಾಗಿ ದಿನಾಂಕ: .......................... ರಂದು ಸ್ವೀಕರಿಸಿದೆ.

ಜಿಲ್ಲಾ ವ್ಯವಸ್ಥಾಪಕರು
ಕ.ರಾ.ಮ.ಅ. ನಿಗಮದ ಪರವಾಗಿ

ಪಿ.ಆರ್.1827

**LAW, JUSTICE & HUMAN RIGHTS SECRETARIAT**
**No. LAW 67 LAC 2007, Bangalore dated 5th September 2007**
**ADDENDUM**

In the Government Order No. LAW 67 LAC 2007 dated 30th August 2007, after the first paragraph of the Order portion, the following shall be added as second paragraph:

"This Order shall come into force with effect from 1-11-1999".

By order and in the name of the Governor of Karnataka,
**E. SHIVANANDA**
Under Secretary to Government,
Law, Justice & Human Rights Department. (Admn-1)

PR. 1704